(8) Details of proprietor / partners / directors / executive committee members/trustees,-
(a) Name
(b) Sex and Age
(c) Aadhaar Number (mandatory for person applying on behalf of the establishment)
(d) Contact details: Mobile / email

(9) Details of Administrator or Manager,-
(a) Name
(b) Sex and Age
(c) Aadhaar Number (mandatory for person applying on behalf of the establishment)
(d) Photograph
(e) Contact details: Mobile / email

(10) Contact details of the Establishment,-
(a) Email
(b) Phone

(11) Details of Infrastructure,-
(a) Land Area
(b) Building Area (total built-up area).
(c) Floor plans[20]
(d) Front view photograph[21]
(g) Occupancy certificate[22, 23]
(h) Fire safety certificate[24, 25]

(12) Details of Staff,-
(i) Details of all medical staff,-
(a) Name
(b) Qualification
(c) Sex and Age (optional)
(d) KMC[26] or KAUP Board[27] or KBHSM[28] Registration Number (mandatory)
(e) Photograph
(f) Contact details: Mobile / email

iii. Details of all para-medical staff (nursing, pharmacy, diagnostic, etc),-
(a) Name
(b) Qualification
(c) Sex and Age (optional)
(d) KSNC[29] or KSPC[30] Registration Number (mandatory)
(e) Photograph
(f) Contact details: Mobile / email

(13) Internal Grievance Redressal Mechanism – Brief description and contact details of grievance redressal person

(14) Details of fee paid – Challan Number, Date and Amount

## Form C

**(See sub-rule (1) of rule 16)**

**Establishment Details for Display to the Public[31]—**

(1) Name of Establishment
(2) Address of Establishment
(3) GIS Coordinates

---

20 Upload plan for each floor in A4 size
21 Upload photograph of front view of the building taken as per operational guidelines
22 Upload the occupancy certificate
23 Occupancy certificate is optional for existing establishments
24 Upload the fire safety certificate
25 Nature of fire safety requirement in respect of existing establishments to be notified separately
26 Karnataka Medical Council
27 Karnataka Ayurvedic and Unani Practitioners Board
28 Karnataka Board of Homeopathic System of Medicine
29 Karnataka State Nursing Council
30 Karnataka State Pharmacy Council
31 Detailed guidelines shall be available on the IT portal of the department

(4) Category of Establishment (See rule 3)[32]

(a) System of medicine

(b) Number of beds

(c) Details of specialties or super-specialties

(5) Details of Administrator or Manager,-

(a) Name

(b) Sex and Age

(c) Photograph

(d) Contact details:

(i) Mobile (mandatory)

(ii) Email (mandatory)

(6) Contact details of the Establishment,-

(a) Email

(b) Phone

(7) Infrastructure,-

(a) Land Area

(b) Building Area (total built-up area)

(c) Front view photographcertificate[33]

(d) Occupancy certificate[34],[35]

(e) Fire safety certificate[36],[37]

(8) Details of Staff,-

(i) Details of all medical staff,-

(a) Name

(b) Qualification

(c) KMC[38] or KAUP Board[39] or KBHSM[40] Registration Number (mandatory)

(d) Sex and Age (Optional)

(e) Photograph

(f) Contact details:

i. Mobile (optional)

ii. Email (optional)

(ii) Details of para-medical staff (service head only, eg, nursing, pharmacy, diagnostic, etc),-

(a) Name

(b) Qualification

(c) Sex and Age (Optional)

(d) Photograph

(e) KSNC[41] or KSPC[42] Registration Number (mandatory)

(f) Contact details:

i. Mobile (optional)

ii. Email (optional)

(9) Internal Grievance Redressal Mechanism – Brief description and contact details of grievance redressal person

(10) Details of DigiLocker service, if provided.

(11) Number of Patients and major treatments during the Year and Month (..........),-

---

32 Provide details of specialties or super-specialties and diagnostic facilities

33 Upload photograph of front view of the building taken as per operational guidelines

34 Upload the occupancy certificate

35 Occupancy certificate is optional for existing establishments

36 Upload the fire safety certificate

37 Nature of fire safety requirement in respect of existing establishments to be notified separately

38 Karnataka Medical Council

39 Karnataka Ayurvedic and Unani Practitioners Board

40 Karnataka Board of Homeopathic System of Medicine

41 Karnataka State Nursing Council

42 Karnataka State Pharmacy Council

a. Outpatients
b. Inpatients
c. Major Surgeries
d. Minor Surgeries

(12). Date of last update

*******

13. **Insertion of Form D.-** After Form-C so substituted, the following new Form shall be inserted at the end, namely:-

**"Form D**

**(See sub-rule (1) of rule 17)**

**Schedule of Charges for Display to the Public**[43]

(1) Name of the Establishment
(2) Registration Number
(3) Date of effect of the Schedule of Charges

**Schedule of Charges**[44]

| Sl.No. | Item[45] | Code | Charge (in Rupees) |
|---|---|---|---|
| 1 | Consultation Fee[46] | | |
| 2 | Surgery Fee[47] | | |
| 3 | Treatments[48] | | |
| 4 | Diagnostic tests[49] | | |
| 5 | Hospital Charges[50] | | |

By Order and in the name of the
Governor of Karnataka

K. NARAYANA 27/03/2018
Additional Secretary to Government
Health and Family Welfae Department

43 Detailed guidelines shall be available on the IT portal of the department
44 Charges for all medical services to be provided
45 Add rows for each item as required
46 For each medical staff, if uniform fee is not followed
47 For each surgeon, if uniform fee is not followed
48 Treatment description and code shall be as per standards recommended by the National Council constituted under the Clinical Establishment (Registration and Regulation) Act 2010 (Central Act 23 of 2010)
49 Major treatments shall be listed ahead of others
50 Major tests shall be listed ahead of others"

KA/BG-GPO/2515/WPP-47/2006-2008

ಸುವರ್ಣ ಕರ್ನಾಟಕ



# ಕರ್ನಾಟಕ ರಾಜ್ಯಪತ್ರ


ಅಧಿಕೃತವಾಗಿ ಪ್ರಕಟಿಸಲಾದುದು

ವಿಶೇಷ ಪತ್ರಿಕೆ

| ಭಾಗ-IV-A | ಬೆಂಗಳೂರು, ಗುರುವಾರ, ಆಗಸ್ಟ್ ೧೬, ೨೦೦೭ (ಶ್ರಾವಣ ೨೫, ಶಕ ವರ್ಷ ೧೯೨೯) | ನಂ.೧೫೦೪ |
|---|---|---|


ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

ಅಧಿಸೂಚನೆ

ಸಂ: ಸಂವ್ಯಶಾಇ 60 ಶಾಸನ 2005, ಬೆಂಗಳೂರು, ದಿನಾಂಕ : 16ನೇ ಆಗಸ್ಟ್ 2007

ಕರ್ನಾಟಕ ಖಾಸಗಿ ವೈದ್ಯಕೀಯ ಸಂಸ್ಥೆಗಳ ವಿಧೇಯಕ, 2007ಕ್ಕೆ 2007ರ ಆಗಸ್ಟ್ ಮಾಹೆಯ ಹದಿಮೂರನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2007ರ ಕರ್ನಾಟಕ ಅದಿನಿಯಮ ಸಂಖ್ಯೆ:21 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

2007ರ ಕರ್ನಾಟಕ ಅದಿನಿಯಮ ಸಂಖ್ಯೆ.21

(2007ರ ಆಗಸ್ಟ್ ಹದಿನಾರನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

## ಕರ್ನಾಟಕ ಖಾಸಗಿ ವೈದ್ಯಕೀಯ ಸಂಸ್ಥೆಗಳ ಅದಿನಿಯಮ, 2007

(2007ರ ಅಗಸ್ಟ್ ಹದಿಮೂರನೇ ದಿನಾಂಕದಂದು ರಾಜ್ಯಪಾಲರ ಅನುಮೋದನೆಯನ್ನು ಪಡೆಯಲಾಗಿದೆ)

ಕರ್ನಾಟಕ ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ ಸಂಸ್ಥೆಗಳ ಪುರೋಭಿವೃದ್ಧಿ ಮತ್ತು ಅವುಗಳ ಮೇಲ್ವಿಚಾರಣೆಗೆ ಹಾಗೂ ಅವುಗಳಿಗೆ ಸಂಬಂಧಿಸಿದ ಅಥವಾ ಪ್ರಾಸಂಗಿಕವಾದ ವಿಷಯಗಳಿಗಾಗಿ ಉಪಬಂಧ ಕಲ್ಪಿಸಲು ಒಂದು ಅಧಿನಿಯಮ.

ಸಾರ್ವಜನಿಕರ ಹಿತದೃಷ್ಟಿಯಿಂದ ಉತ್ತಮ ಗುಣಮಟ್ಟದ ಆರೋಗ್ಯಪಾಲನೆಗೆ ಉತ್ತೇಜನ ನೀಡುವುದು ಮತ್ತು ವೈದ್ಯ ಧರ್ಮದ ತತ್ವಗಳಿಗನುಸಾರವಾಗಿ ಖಾಸಗಿ ವೈದ್ಯಕೀಯ ಸಂಸ್ಥೆಗಳು ಒದಗಿಸಬೇಕಾದ ಸೇವೆಯ ಗುಣಮಟ್ಟಗಳನ್ನು ನಿಗದಿಪಡಿಸುವ ಮೂಲಕ ರಾಜ್ಯದಲ್ಲಿ ಖಾಸಗಿ ವೈದ್ಯಕೀಯ ಸಂಸ್ಥೆಗಳ ವ್ಯವಹಾರಗಳನ್ನು ಕಾನೂನಿನ ಮೂಲಕ ನಿಯಂತ್ರಿಸಿ ಮೇಲ್ವಿಚಾರಣೆ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಐವತ್ತೆಂಟನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:-

1. **ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ:-**

(1) ಈ ಅಧಿನಿಯಮವನ್ನು ಕರ್ನಾಟಕ ಖಾಸಗಿ ವೈದ್ಯಕೀಯ ಸಂಸ್ಥೆಗಳ ಅಧಿನಿಯಮ, 2007 ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು ಮತ್ತು ಈ ಅಧಿನಿಯಮದ ಬೇರೆ ಬೇರೆ ಉಪಬಂಧಗಳಿಗೆ ಬೇರೆ ಬೇರೆ ದಿನಾಂಕಗಳನ್ನು ಗೊತ್ತುಪಡಿಸಬಹುದು.

2. **ಪರಿಭಾಷೆಗಳು:-** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(i) "**ಅಪೀಲು ಪ್ರಾಧಿಕಾರ**" ಎಂದರೆ, 16ನೇ ಪ್ರಕರಣದಲ್ಲಿ ಉಲ್ಲೇಖಿಸಲಾದ ಅಪೀಲು ಪ್ರಾಧಿಕಾರ;

(ii) "**ಗೊತ್ತುಪಡಿಸಲಾದ ದಿನ**" ಎಂದರೆ, 1ನೇ ಪ್ರಕರಣದ (2) ನೇ ಉಪ-ಪ್ರಕರಣದಡಿ ಗೊತ್ತುಪಡಿಸಲಾದ ದಿನಾಂಕ;

(iii) "**ಚಿಕಿತ್ಸಾ ಪ್ರಯೋಗಾಲಯ**" ಎಂದರೆ,-

(1) ಜೀವ ವೈಜ್ಞಾನಿಕ (ರೋಗಪತ್ತೆ ಶಾಸ್ತ್ರದ), ಸೂಕ್ಷ್ಮಾಣು ಜೀವಿಶಾಸ್ತ್ರದ, ಕ್ಷ-ಕಿರಣ, ಸೂಕ್ಷ್ಮದರ್ಶಿ, ರಾಸಾಯನಿಕ ಅಥವಾ ಇತರೇ ಪರೀಕ್ಷೆಗಳನ್ನು, ತಪಾಸಣೆಗಳನ್ನು ಅಥವಾ ವಿಶ್ಲೇಷಣೆಗಳನ್ನು ಮಾಡುವ; ಅಥವಾ

(2) ಸೂಕ್ಷ್ಮಜೀವಿ ಕಲ್ಚರ್‌ಗಳು, ರಸಿಕೆಗಳು, ಲಸಿಕೆಗಳು ಅಥವಾ ಇತರ ಜೀವಶಾಸ್ತ್ರ ಅಥವಾ ಸೂಕ್ಷ್ಮಾಣು ಜೀವಿಶಾಸ್ತ್ರದ ಉತ್ಪನ್ನಗಳನ್ನು ರೋಗಗಳ ಪತ್ತೆ ಅಥವಾ ಚಿಕಿತ್ಸೆಯ ಸಂಬಂಧದಲ್ಲಿ ತಯಾರಿಸುವುದು ಅಥವಾ ಮಾಡಿಕೆಯಾಗಿ ತಯಾರಿಸುವುದನ್ನು ಮಾಡುವ: - ಒಂದು ಸಂಸ್ಥೆ;

(iv) "**ಚಿಕಿತ್ಸಾ ದಾಖಲೆಗಳು**" ಎಂದರೆ, ಮಾನವ ಶರೀರ ಅಥವಾ ಅದರ ಯಾವುದೇ ಒಂದು ಭಾಗ ಅಥವಾ ಅದರಿಂದ ತೆಗೆದುಕೊಳ್ಳಲಾಗುವ ಯಾವುದೇ ವಸ್ತುವಿನ ಯಾವುದೇ ಸ್ಥಿತಿಗತಿಯನ್ನು ಮತ್ತು ಆ ವ್ಯಕ್ತಿಗೆ ನೀಡಲಾದ ಅಥವಾ ಆತ ಒಳಗಾದ ಚಿಕಿತ್ಸೆಯ ಕ್ರಮವನ್ನು ಸೂಚಿಸಲು ಮತ್ತು ಪತ್ತೆ ಹಚ್ಚಲು, ಅಥವಾ ಅರ್ಥ ಮಾಡಿಕೊಳ್ಳಲು ಬಳಸಬಹುದಾದಂಥ ಯಾವುದೇ ಕಾಗದ, ಮುದ್ರಿತ ಫಿಲ್ಮು, ಸ್ಲೈಡು, ದ್ರಾವಣ ಅಥವಾ ಮಾಧ್ಯಮ.

(v) "**ಇಲಾಖೆ**" ಎಂದರೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಅಥವಾ ಸಂಧರ್ಭಾನುಸಾರ ಕರ್ನಾಟಕ ಸರ್ಕಾರದ ಭಾರತೀಯ ವೈದ್ಯಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ;

(vi) "**ಕುಟುಂಬದ ಸದಸ್ಯ**" ಎಂದರೆ, ಗಂಡ ಅಥವಾ ಹೆಂಡತಿ ಯಾವೊಬ್ಬ ಮಗ, ಮಗಳು ಅಥವಾ ಯಾವೊಬ್ಬ ಇತರ ಕಾನೂನು ಸಮ್ಮತ ವಾರಸುದಾರ ಅಥವಾ ಆತನ ವಯಸ್ಸನ್ನು ಗಣನೆಗೆ ತೆಗೆದುಕೊಳ್ಳದೆ ಕಾನೂನು ಸಮ್ಮತ ಸಂರಕ್ಷಕ.

(vii) "**ಆರೋಗ್ಯಕಾರಿ**" ಎಂದರೆ, ಉತ್ತಮ ಆರೋಗ್ಯಕ್ಕೆ ಅನುಕೂಲಕರವಾದ ಒಂದು ಪರಿಸ್ಥಿತಿ;

(viii) "ಸ್ಥಳೀಯ ಪರಿಶೀಲನಾ ಸಮಿತಿ" ಎಂದರೆ, 8ನೇ ಪ್ರಕರಣದಡಿಯಲ್ಲಿ ರಚಿಸಲಾದ ಸ್ಥಳೀಯ ಪರಿಶೀಲನಾ ಸಮಿತಿ;

(ix) ಖಾಸಗಿ ವೈದ್ಯಕೀಯ ಸಂಸ್ಥೆಗೆ ಸಂಬಂಧಿಸಿದಂತೆ "ವ್ಯವಸ್ಥಾಪಕ" ಎಂದರೆ, ಆತನ ಹೆಸರು ಅಥವಾ ಪದನಾಮ ಯಾವುದೇ ಇರಲಿ, ಖಾಸಗಿ ವೈದ್ಯಕೀಯ ಸಂಸ್ಥೆಯನ್ನು ನಡೆಸುವ ಅಥವಾ ನಿರ್ವಹಣೆಯ ಪ್ರಭಾರವನ್ನು ಹೊಂದಿರುವ ಅಥವಾ ವಹಿಸಿಕೊಂಡಿರುವ, ಒಬ್ಬ ವ್ಯಕ್ತಿ;

(x) "ಪ್ರಸೂತಿ ಗೃಹ" ಎಂದರೆ, ಶಿಶುಜನನಕ್ಕೆ ಸಂಬಂಧಿಸಿದಂತೆ ಹೆರಿಗೆಗಾಗಿ ಮತ್ತು ಗರ್ಭಿಣಿಯರ ಪೂರ್ವದ ಅಥವಾ ಬಾಣಂತಿಯರ ಶುಶ್ರೂಷೆಯ ಉದ್ದೇಶಕ್ಕಾಗಿ ಸಾಮಾನ್ಯವಾಗಿ ಮಹಿಳೆಯರನ್ನು ಬರಮಾಡಿಕೊಳ್ಳುವ ಅಥವಾ ದಾಖಲು ಮಾಡಿಕೊಳ್ಳುವ ಅಥವಾ ಇವೆರಡಕ್ಕಾಗಿಯೂ ಇರುವ ಸಂಸ್ಥೆ ಹಾಗೂ ಇದು ಸಂತಾನ ಶಕ್ತಿ ಹರಣ ಶಸ್ತ್ರಚಿಕಿತ್ಸೆಗಾಗಿ ಅಥವಾ ವೈದ್ಯಕೀಯ ಗರ್ಭಪಾತದ ಉದ್ದೇಶಕ್ಕಾಗಿ ಮಹಿಳೆಯರನ್ನು ಬರಮಾಡಿಕೊಳ್ಳುವ ಅಥವಾ ದಾಖಲು ಮಾಡಿಕೊಳ್ಳುವ ಸಂಸ್ಥೆಯನ್ನೂ ಒಳಗೊಳ್ಳುತ್ತದೆ;

(xi) "ವೈದ್ಯವೃತ್ತಿಗ" ಎಂದರೆ, ವೈದ್ಯವೃತ್ತಿಗನು ತಾನು ವ್ಯಾಸಂಗ ಮಾಡಿದ, ಅರ್ಹತೆ ಪಡೆದ ಮತ್ತು ನೋಂದಾಯಿತನಾದ ವೈದ್ಯ ಪದ್ಧತಿಯಲ್ಲಿ ವೃತ್ತಿ ನಡೆಸುವುದಕ್ಕಾಗಿ ಹೋಮಿಯೋಪತಿ ವೃತ್ತಿಗರ ಅಧಿನಿಯಮ, 1961 (1961ರ ಕರ್ನಾಟಕ ಅಧಿನಿಯಮ 35), ಆಯುರ್ವೇದ, ಪ್ರಕೃತಿ ಚಿಕಿತ್ಸೆ, ಸಿದ್ಧ, ಯುನಾನಿ ಅಥವಾ ಯೋಗ ವೈದ್ಯ ವೃತ್ತಿಗರ ನೋಂದಣಿ ಮತ್ತು ವೈದ್ಯ ವೃತ್ತಿಗರ ಸಂಕೀರ್ಣ ಉಪಬಂಧಗಳ ಅಧಿನಿಯಮ, 1961 (1962ರ ಕರ್ನಾಟಕ ಅಧಿನಿಯಮ 9), ವೈದ್ಯಕೀಯ ನೋಂದಣಿ ಅಧಿನಿಯಮ, 1961 (1961ರ ಕರ್ನಾಟಕ ಅಧಿನಿಯಮ 34), ಭಾರತೀಯ ವೈದ್ಯ ಕೇಂದ್ರ ಪರಿಷತ್ತು ಅಧಿನಿಯಮ, 1970 (1970ರ ಕೇಂದ್ರ ಅಧಿನಿಯಮ 48) ಹೋಮಿಯೋಪತಿ ಕೇಂದ್ರ ಪರಿಷತ್ತು ಅಧಿನಿಯಮ, 1978 (1973ರ ಕೇಂದ್ರ ಅಧಿನಿಯಮ 59) ಮತ್ತು ವೈದ್ಯ ಪರಿಷತ್ತು ಅಧಿನಿಯಮ, 1956 (1956ರ ಕೇಂದ್ರ ಅಧಿನಿಯಮ 102) ಇವುಗಳಡಿಯಲ್ಲಿ ನೋಂದಾಯಿತನಾದ ಒಬ್ಬ ವ್ಯಕ್ತಿ ಮತ್ತು ದಂತವೈದ್ಯರುಗಳ ಅಧಿನಿಯಮ, 1948ರ (1948ರ ಕೇಂದ್ರ ಅಧಿನಿಯಮ 16) ಅಡಿಯಲ್ಲಿ ನೋಂದಾಯಿತನಾದ ಒಬ್ಬ ದಂತವೈದ್ಯನನ್ನೂ ಇದು ಒಳಗೊಳ್ಳುತ್ತದೆ;

(xii) "ವೈದ್ಯಕೀಯ ಚಿಕಿತ್ಸೆ" ಎಂದರೆ, ಅಲೋಪತಿಯ ಅಥವಾ ಇತರ ಯಾವುದೇ ಮಾನ್ಯತೆ ಪಡೆದ ವೈದ್ಯ ಪದ್ಧತಿಗಳಾದಂಥ ಆಯುರ್ವೇದ, ಯುನಾನಿ ಹೋಮಿಯೋಪತಿ, ಯೋಗ, ಪ್ರಕೃತಿ ಚಿಕಿತ್ಸೆ ಮತ್ತು ಸಿದ್ಧ ಇವುಗಳ ಮೂಲಕ ಯಾವೊಬ್ಬ ವ್ಯಕ್ತಿಯ ಆರೋಗ್ಯ ಸ್ಥಿತಿಯನ್ನು ಸುಧಾರಿಸಲು ಅಥವಾ ಯಾವುದೇ ರೋಗವನ್ನು ಗುಣಪಡಿಸಲು ಅಥವಾ ತಡೆಗಟ್ಟಲು ಮಾಡುವ ಕ್ರಮಬದ್ಧ ರೋಗನಿದಾನ ಮತ್ತು ಚಿಕಿತ್ಸೆ; ಮತ್ತು ಇದು ಆಕ್ಯುಪಂಕ್ಚರ್ ಮತ್ತು ಆಕ್ಯುಪ್ರೆಷರ್ ಚಿಕಿತ್ಸೆಗಳನ್ನು ಒಳಗೊಳ್ಳುತ್ತದೆ;

(xiii) "ನರ್ಸಿಂಗ್ ಹೋಂ" ಎಂದರೆ, ಅಸ್ವಸ್ಥತೆಯಿಂದ, ಗಾಯದಿಂದ ಅಥವಾ (ದೈಹಿಕ ಅಥವಾ ಮಾನಸಿಕ) ಅಶಕ್ತತೆಯಿಂದ ಬಳಲುತ್ತಿರುವ ರೋಗಿಗಳನ್ನು ರೋಗಗಳ ಅಥವಾ ಅಶಕ್ತತೆಯ ಚಿಕಿತ್ಸೆಯ ಅಥವಾ ಆರೋಗ್ಯವನ್ನು ಸುಧಾರಿಸಿಕೊಳ್ಳುವ ಉದ್ದೇಶದಿಂದ ಅಥವಾ ವಿಶ್ರಾಂತಿಯ ಉದ್ದೇಶಕ್ಕಾಗಿ ಅಥವಾ ಈ ಪ್ರಕರಣದ (ಎಲ್) ಖಂಡದಲ್ಲಿ ಹೇಳಲಾಗಿರುವ ಉದ್ದೇಶಗಳಿಗೆ ಅನುರೂಪವಾದ ಅಥವಾ ಅನುರೂಪವಾಗಿರದ ಉದ್ದೇಶಕ್ಕಾಗಿ ಅಥವಾ ಇನ್ನಾವುದಾದರೂ ಉದ್ದೇಶಕ್ಕಾಗಿ ಸಾಮಾನ್ಯವಾಗಿ ವ್ಯಕ್ತಿಗಳನ್ನು ಬರಮಾಡಿಕೊಳ್ಳುವ ಅಥವಾ ದಾಖಲುಮಾಡಿಕೊಳ್ಳುವ ಒಂದು ಸಂಸ್ಥೆ;

(xiv) "ಖಾಸಗಿ ವೈದ್ಯಕೀಯ ಸಂಸ್ಥೆ" ಎಂದರೆ, ಹಾಸಿಗೆಗಳುಳ್ಳ ಅಥವಾ ಹಾಸಿಗೆಗಳಿಲ್ಲದಿರುವ ಆಸ್ಪತ್ರೆ ಅಥವಾ ದವಾಖಾನೆ, ನರ್ಸಿಂಗ್ ಹೋಂ, ಚಿಕಿತ್ಸಾ ಪ್ರಯೋಗಾಲಯ, ರೋಗನಿದಾನ ಕೇಂದ್ರ, ಪ್ರಸೂತಿ ಗೃಹ, ರಕ್ತನಿಧಿ, ಕ್ಷಕಿರಣ ಪರೀಕ್ಷಾ ಕೇಂದ್ರ, ಸ್ಕ್ಯಾನಿಂಗ್ ಕೇಂದ್ರ, ಫಿಸಿಯೋಥೆರಪಿ ಕೇಂದ್ರ, ಚಿಕಿತ್ಸಾಲಯ, ಪಾಲಿಕ್ಲಿನಿಕ್, ವೈದ್ಯಸಲಹಾ ಕೇಂದ್ರ (Consultation centre) ಮತ್ತು ಸಾರ್ವಜನಿಕರಿಗೆ ರೋಗ ತಪಾಸಣೆ, ರೋಗ ನಿದಾನ, ರೋಗ ತಡೆಗಟ್ಟುವಿಕೆ ಅಥವಾ ರೋಗಗುಣಪಡಿಸುವ ಅಥವಾ ಮರು ಚೇತರಿಕೆ ಸ್ಥಾಪಿಸುವ (rehabilitation) - ವೈದ್ಯಕೀಯ ಚಿಕಿತ್ಸಾ ಸೌಲಭ್ಯಗಳನ್ನು ಒದಗಿಸುವ ಯಾವುದೇ ಹೆಸರಿನಿಂದ ಕರೆಯಬಹುದಾದಂಥ ಇತರ ಸಂಸ್ಥೆಗಳು ಮತ್ತು ಸ್ವಯಂ ಸೇವಾ ಅಥವಾ ಖಾಸಗಿ ಸಂಸ್ಥೆಗಳನ್ನು ಒಳಗೊಳ್ಳುತ್ತದೆ ಆದರೆ,-

(1) ರಾಜ್ಯ ಸರ್ಕಾರ ಅಥವಾ ಒಂದು ಸ್ಥಳೀಯ ಪ್ರಾಧಿಕಾರ ಅಥವಾ ಇತರ ಶಾಸನಬದ್ಧ ನಿಕಾಯ; (2) ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರದ ಒಡೆತನ ಅಥವಾ ನಿಯಂತ್ರಣದಲ್ಲಿರುವ ಸಾರ್ವಜನಿಕ ವಲಯ ಉದ್ಯಮಗಳು; (3) ರಾಜ್ಯ ಅಥವಾ ಕೇಂದ್ರ ಸರ್ಕಾರಗಳ ಒಡೆತನ ಅಥವ ನಿಯಂತ್ರಣದಲ್ಲಿರುವ ಸ್ವಾಯತ್ತ ಸಂಸ್ಥೆಗಳು; (4) ರಾಜ್ಯ ಅಥವಾ ಕೇಂದ್ರ ಅಥವಾ ಈ ಎರಡೂ ಸರ್ಕಾರಗಳು ಶೇಕಡಾ ಐವತ್ತಕ್ಕಿಂತ ಹೆಚ್ಚಿನ ಷೇರುಗಳನ್ನು ಹೊಂದಿರುವ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಅಡಿ ನೋಂದಾಯಿತವಾದ ಸಹಕಾರ ಸಂಘ; (5) ರಾಜ್ಯ ಅಥವಾ ಕೇಂದ್ರ ಸರ್ಕಾರದ ಒಡೆತನ ಅಥವಾ ನಿಯಂತ್ರಣದಲ್ಲಿರುವ, ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ, 1960 ರಡಿ ನೋಂದಣಿಯಾದ ಸಂಘ; (6) ರಾಜ್ಯ ಅಥವಾ ಕೇಂದ್ರ ಸರ್ಕಾರದ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರದ ಒಡೆತನದ ಅಥವಾ ಮೇಲ್ವಿಚಾರಣೆಯಲ್ಲಿರುವ ಒಂದು ನ್ಯಾಸ, - ಇವುಗಳು ನಡೆಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಅಥವಾ ಪ್ರಾಯೋಜಿಸುತ್ತಿರುವ-ವೈದ್ಯಕೀಯ ಸಂಸ್ಥೆಗಳನ್ನು ಒಳಗೊಳ್ಳುವುದಿಲ್ಲ.

(xv) "ಫಿಸಿಯೋಥೆರಪಿ ಸಂಸ್ಥೆ" ಯು ರೋಗಗಳ ಅಥವಾ ಅಶಕ್ತತೆ ಚಿಕಿತ್ಸೆ ಅಥವಾ ಆರೋಗ್ಯ ಸುಧಾರಣೆಯ ಉದ್ದೇಶಕ್ಕಾಗಿ ಅಥವಾ ವಿಶ್ರಾಂತಿಯ ಉದ್ದೇಶಗಳಿಗಾಗಿ ಅಥವಾ ಈ ಪ್ರಕರಣದ (ಎಲ್) ಖಂಡದಲ್ಲಿ ಹೇಳಲಾದ ಉದ್ದೇಶಗಳಿಗೆ ಅನುರೂಪವಾಗಿರುವ ಅಥವಾ ಅನುರೂಪವಾಗಿರದ ಯಾವುದಾದರೂ ಇತರ ಉದ್ದೇಶಕ್ಕಾಗಿ ಮಾಲೀಷುಮಾಡುವ, ಜಲಚಿಕಿತ್ಸೆಯ, ಚಿಕಿತ್ಸಾ ವ್ಯಾಯಾಮದ (remedial Gynnastics) ಅಥವಾ ಸಾಮಾನ್ಯವಾಗಿ ಅಂಥವೇ ಕೆಲಸವನ್ನು ನಡೆಸುವ ಸಂಸ್ಥೆಗಳನ್ನು ಒಳಗೊಳ್ಳುತ್ತವೆ.

(xvi) "ಸಾರ್ವಜನಿಕ ಪ್ರಾಧಿಕಾರ" ಎಂದರೆ, ಯಾವುದೇ ಕಾನೂನಿನನ್ವಯ ಅಥವಾ ಅದರಡಿಯಲ್ಲಿ ರಚಿಸಲಾದ ಒಂದು ಪ್ರಾಧಿಕಾರ;

(xvii) "ನೋಂದಣಿ" ಎಂದರೆ 7ನೇ ಪ್ರಕರಣದಲ್ಲಿ ನೀಡಲಾದ ನೋಂದಣಿ;

(xviii) "ನೋಂದಣಿ ಪ್ರಾಧಿಕಾರ" ಎಂದರೆ 4ನೇ ಪ್ರಕರಣದಲ್ಲಿ ಉಲ್ಲೇಖಿಸಲಾದ ನೋಂದಣಿ ಪ್ರಾಧಿಕಾರ.

3. **ಖಾಸಗಿ ವೈದ್ಯಕೀಯ ಸಂಸ್ಥೆಗಳ ನೋಂದಣಿ**- ಈ ಅಧಿನಿಯಮದ ಪ್ರಾರಂಭದ ತರುವಾಯ ಆದಷ್ಟು ಬೇಗನೆ ಈ ಅಧಿನಿಯಮದ ಅಡಿಯಲ್ಲಿ ಮಂಜೂರಾದ ನೋಂದಣಿಯ ನಿಬಂಧನೆಗಳು ಹಾಗೂ ಷರತ್ತುಗಳಿಗೆ ಅನುಸಾರವಾಗಿ ಹೊರತು ರಾಜ್ಯದಲ್ಲಿ ಯಾವುದೇ ಖಾಸಗಿ ವೈದ್ಯಕೀಯ ಸಂಸ್ಥೆಗಳನ್ನು ಸ್ಥಾಪಿಸತಕ್ಕದ್ದಲ್ಲ, ನಡೆಸತಕ್ಕದ್ದಲ್ಲ ಅಥವಾ ನಿರ್ವಹಿಸತಕ್ಕದ್ದಲ್ಲ:

ಪರಂತು, ಈ ಅಧಿನಿಯಮದ ಪ್ರಾರಂಭದ ನಿಕಟಪೂರ್ವದಲ್ಲಿ ಅಸ್ತಿತ್ವದಲ್ಲಿರುವ ಖಾಸಗಿ ವೈದ್ಯಕೀಯ ಸಂಸ್ಥೆಗಳು ಗೊತ್ತುಪಡಿಸಿದ ದಿನಾಂಕದಿಂದ ತೊಂಬತ್ತು ದಿನಗಳೊಳಗೆ ಅಂಥ ನೋಂದಣಿಗಾಗಿ ಅರ್ಜಿ ಸಲ್ಲಿಸತಕ್ಕದ್ದು ಮತ್ತು ಅದರ ಮೇಲೆ ಆದೇಶ ಮಾಡುವವರೆಗೂ ಅರ್ಜಿಯನ್ನು ವಿಲೆಮಾಡುವವರೆಗೆ ಅದನ್ನು ನಡೆಸಬಹುದು ಅಥವಾ ನಿರ್ವಹಿಸಿಕೊಂಡು ಬರಬಹುದು.

4. **ನೋಂದಣಿ ಪ್ರಾಧಿಕಾರ–** ಈ ಕೆಳಕಂಡ ಸದಸ್ಯರನ್ನು ಒಳಗೊಂಡಂತೆ ಪ್ರತಿ ಜಿಲ್ಲೆಯಲ್ಲಿ ಒಂದು ನೋಂದಣಿ ಪ್ರಾಧಿಕಾರವು ಇರತಕ್ಕದ್ದು, ಎಂದರೆ:–

| | |
|---|---|
| (ಎ) ಜಿಲ್ಲೆಯ ಜಿಲ್ಲಾಧಿಕಾರಿ | ಅಧ್ಯಕ್ಷರು |
| (ಬಿ) ಜಿಲ್ಲೆಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ | ಸದಸ್ಯರು |
| (ಸಿ) ಸಂಬಂಧಿಸಿದ ಜಿಲ್ಲೆಯ ಭಾರತೀಯ ವೈದ್ಯಕೀಯ ಸಂಘದ ಅಧ್ಯಕ್ಷ/ಕಾರ್ಯದರ್ಶಿ | ಸದಸ್ಯರು |

5. **ನೋಂದಣಿಗಾಗಿ ಅರ್ಜಿ:–** (1) ಖಾಸಗಿ ವೈದ್ಯಕೀಯ ಸಂಸ್ಥೆಗಳನ್ನು ಸ್ಥಾಪಿಸಲು, ನಡೆಸಲು, ನಿರ್ವಹಿಸಲು ಅಥವಾ ನಡೆಸುವುದನ್ನು ಮತ್ತು ನಿರ್ವಹಿಸುವುದನ್ನು ಮುಂದುವರೆಸಲು ಬಯಸುವ ಪ್ರತಿಯೊಬ್ಬ ವ್ಯಕ್ತಿಯು ಸಂಬಂಧಿಸಿದ ನೋಂದಣಿ ಪ್ರಾಧಿಕಾರಕ್ಕೆ ನಿಯಮಿಸಬಹುದಾದಂಥ ನಮೂನೆಯಲ್ಲಿ, ಅಂಥ ವಿಧಾನದಲ್ಲಿ ಹಾಗೂ ಅಂಥ ಶುಲ್ಕದೊಡನೆ ಅರ್ಜಿಯನ್ನು ಸಲ್ಲಿಸತಕ್ಕದ್ದು ಮತ್ತು ಬೇರೆ ಬೇರೆ ವೈದ್ಯಕೀಯ ಸಂಸ್ಥೆಗಳ ವರ್ಗ ಅಥವಾ ವರ್ಗಗಳಿಗೆ ಬೇರೆ ಬೇರೆ ಶುಲ್ಕವನ್ನು ನಿಯಮಿಸಬಹುದು.

6. **ಖಾಸಗಿ ವೈದ್ಯಕೀಯ ಸಂಸ್ಥೆಗಳ ನೋಂದಣಿಗಾಗಿ ಪೂರ್ವ ಅಗತ್ಯತೆಗಳು.–** ನೋಂದಣಿ ಪ್ರಾಧಿಕಾರವು ನೋಂದಣಿಯನ್ನು ಮಂಜೂರುಮಾಡುವ ಖಾಸಗಿ ವೈದ್ಯಕೀಯ ಸಂಸ್ಥೆಗಳ ನೋಂದಣಿಗಾಗಿ ಇರುವ ಈ ಮುಂದಿನ ಪೂರ್ವ ಅಗತ್ಯತೆಗಳನ್ನು ಪೂರೈಸಲಾಗಿದೆಯೇ ಎಂಬುದನ್ನು ಪರಿಗಣಿಸತಕ್ಕದ್ದು, ಎಂದರೆ:–

(i) ಖಾಸಗಿ ವೈದ್ಯಕೀಯ ಸಂಸ್ಥೆಯು ಆರೋಗ್ಯಕರ ಪರಿಸರದಲ್ಲಿ ಇದೆ ಮತ್ತು ಅದು ಸ್ಥಾಪನೆಯಾದ ಅಥವಾ ಸ್ಥಾಪನೆಯಾಗಬೇಕಾದ ಉದ್ದೇಶಕ್ಕೆ ಸೂಕ್ತವಾಗಿದೆ; (ii) ಖಾಸಗಿ ವೈದ್ಯಕೀಯ ಸಂಸ್ಥೆಯು ವಿದ್ಯಾರ್ಹತೆಯುಳ್ಳ ವೈದ್ಯರನ್ನು, ವಿದ್ಯಾರ್ಹತೆಯುಳ್ಳ ಮತ್ತು ತರಬೇತಿ ಹೊಂದಿದ ಅರೆ ವೈದ್ಯಕೀಯ ಸಿಬ್ಬಂದಿಯನ್ನು ಹೊಂದಿದೆ; (iii) ಖಾಸಗಿ ವೈದ್ಯಕೀಯ ಸಂಸ್ಥೆಯು ತನ್ನ ವಿವಿಧ ಪ್ರಕಾರ್ಯಗಳನ್ನು ನಡೆಸಲು, ಸಾಧನ ಸಲಕರಣೆಗಳು ಹಾಗೂ ಇತರ ಮೂಲ ಸೌಕರ್ಯಗಳಿಗಾಗಿ, ಅವಶ್ಯಕವಾದ ಕಟ್ಟಡಗಳನ್ನು ಹೊಂದಿದೆ; (iv) ಖಾಸಗಿ ವೈದ್ಯಕೀಯ ಸಂಸ್ಥೆಯು 9ನೇ ಪ್ರಕರಣದಲ್ಲಿ ಉಲ್ಲೇಖಿಸಿದ ಮಾನಕ ಗುಣಮಟ್ಟಗಳಿಗೆ ಅನುಗುಣವಾಗಿದೆ; (v) ನಿಯಮಿಸಬಹುದಾದ ಅಂಥ ಇತರ ಅಂಶಗಳು.

7. **ಅರ್ಜಿಗಳ ವಿಲೆ–** (1) 5ನೇ ಪ್ರಕರಣದ ಅಡಿಯಲ್ಲಿ ಒಂದು ಅರ್ಜಿಯನ್ನು ಸ್ವೀಕರಿಸಿದ ತರುವಾಯ, ನೋಂದಣಿ ಪ್ರಾಧಿಕಾರವು 6ನೇ ಪ್ರಕರಣದ ಉಪಬಂಧಗಳನ್ನು ಗಮನದಲ್ಲಿಟ್ಟುಕೊಂಡು ಮತ್ತು ಅವಶ್ಯಕವಾಗಬಹುದಾದಂಥ ವಿಚಾರಣೆಯನ್ನು ಸ್ಥಳೀಯ ಪರಿಶೀಲನಾ ಸಮಿತಿಯ ಮೂಲಕ ನಡೆಸಿದ ತರುವಾಯ ನಿಯಮಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು ನೋಂದಣಿಯನ್ನು ಮಂಜೂರು ಮಾಡಬಹುದು ಅಥವಾ ಅರ್ಜಿಯನ್ನು ತಿರಸ್ಕರಿಸಬಹುದು:

ಪರಂತು, ನೋಂದಣಿ ಪ್ರಾಧಿಕಾರವು ಅರ್ಜಿದಾರನಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ನೀಡಿದ ಹೊರತು ಮತ್ತು ಅಂಥ ತಿರಸ್ಕಾರಕ್ಕೆ ಕಾರಣಗಳನ್ನು ದಾಖಲಿಸಿದ ಹೊರತು ಅರ್ಜಿಯನ್ನು ತಿರಸ್ಕರಿಸತಕ್ಕದ್ದಲ್ಲ. (2) (1)ನೇ ಉಪಪ್ರಕರಣದಲ್ಲಿ ಹೊರಡಿಸಿದ ಪ್ರತಿಯೊಂದು ಆದೇಶವನ್ನು ಕೂಡಲೇ ಅರ್ಜಿದಾರನಿಗೆ ತಿಳಿಸತಕ್ಕದ್ದು. (3) (1)ನೇ ಉಪ ಪ್ರಕರಣದ ಅಡಿಯಲ್ಲಿ ಮಂಜೂರು ಮಾಡಿದ ಪ್ರತಿಯೊಂದು ನೋಂದಣಿಯು ಐದು ವರ್ಷಗಳ ಅವಧಿಯ ವರೆಗೆ ಸಿಂಧುತ್ವವನ್ನು ಹೊಂದಿರುತ್ತದೆ ಮತ್ತು ನಿಯಮಿಸಬಹುದಾದಂಥ ವಿಧಾನದಲ್ಲಿ ಮತ್ತು ಅಂಥ ಶುಲ್ಕವನ್ನು ಸಂದಾಯಿಸಿ ಅರ್ಜಿ ಸಲ್ಲಿಸಿದ ಮೇಲೆ ಒಂದು ಬಾರಿಗೆ ಐದು ವರ್ಷಗಳ ವರೆಗೆ ನವೀಕರಿಸಬಹುದು.

8. **ಸ್ಥಳೀಯ ಪರಿಶೀಲನಾ ಸಮಿತಿ–** (1) ಪ್ರತಿಯೊಂದು ಜಿಲ್ಲೆಯ ನೋಂದಣಿ ಪ್ರಾಧಿಕಾರವು ಈ ಪ್ರಕರಣದ (2)ನೇ ಉಪಪ್ರಕರಣ ಹಾಗೂ 7ನೇ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಉದ್ದೇಶಗಳಿಗಾಗಿ ಅದು ನಿರ್ದಿಷ್ಟಪಡಿಸಬಹುದಾದಂಥ ವ್ಯಕ್ತಿಗಳನ್ನು ಒಳಗೊಂಡಂತೆ ಪ್ರತಿಯೊಂದು ಜಿಲ್ಲೆಗೆ ಒಂದು ಅಥವಾ ಹೆಚ್ಚು ಸ್ಥಳೀಯ ಪರಿಶೀಲನಾ ಸಮಿತಿಗಳನ್ನು ರಚಿಸಬಹುದು. (2) ಸ್ಥಳೀಯ ಪರಿಶೀಲನಾ ಸಮಿತಿಯು ಪೂರ್ವ ಮಾಹಿತಿಕೊಟ್ಟು ಅಥವಾ ದೂರನ್ನು ಸ್ವೀಕರಿಸಿದ ಮೇಲೆ ಈ ಅಧಿನಿಯಮದ ಉಪಬಂಧಗಳನ್ನು ಹಾಗೂ ಅದರಡಿಯಲ್ಲಿ ರಚಿಸಿದ ನಿಯಮಗಳನ್ನು ಮತ್ತು ನೋಂದಣಿಯ ಷರತ್ತುಗಳನ್ನು ಸಮರ್ಪಕವಾಗಿ ಪಾಲಿಸಲಾಗಿದೆಯೆಂದು ತಾನು ಮನದಟ್ಟು ಮಾಡಿಕೊಳ್ಳಲು ಯಾವುದೇ ಸೂಕ್ತ ಸಮಯದಲ್ಲಿ ಖಾಸಗಿ ವೈದ್ಯಕೀಯ ಸಂಸ್ಥೆಯನ್ನು ಪರಿಶೀಲಿಸಬಹುದು. (3) ಪರಿಶೀಲನಾ ಸಮಯದಲ್ಲಿ ಯಾವುದೇ ದೋಷಗಳು ಅಥವಾ ಕೊರತೆಗಳು ಕಂಡುಬಂದರೆ, ಸ್ಥಳೀಯ ಪರಿಶೀಲನಾ ಸಮಿತಿಯು ಅದನ್ನು ನೋಂದಣಿ ಪ್ರಾಧಿಕಾರಕ್ಕೆ ತಿಳಿಸತಕ್ಕದ್ದು. ನೋಂದಣಿ ಪ್ರಾಧಿಕಾರವು ಖಾಸಗಿ ವೈದ್ಯಕೀಯ ಸಂಸ್ಥೆಯ ವ್ಯವಸ್ಥಾಪಕನಿಗೆ, ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಸಮಂಜಸ ಅವಧಿಯೊಳಗೆ ಅದನ್ನು ಸರಿಪಡಿಸಲು ನಿರ್ದೇಶಿಸಬಹುದು. ತದನಂತರ ವ್ಯವಸ್ಥಾಪಕನು ಅಂಥ ಪ್ರತಿಯೊಂದು ನಿರ್ದೇಶನವನ್ನು ಪಾಲಿಸತಕ್ಕದ್ದು ಮತ್ತು ಹಾಗೆ ನಿರ್ದಿಷ್ಟಪಡಿಸಿದ ಅವಧಿಯೊಳಗೆ ನೋಂದಣಿ ಪ್ರಾಧಿಕಾರಕ್ಕೆ ಹಾಗೆ ಪಾಲಿಸಿರುವ ಬಗ್ಗೆ ವರದಿಯನ್ನು ಸಲ್ಲಿಸತಕ್ಕದ್ದು. (4) ಖಾಸಗಿ ವೈದ್ಯಕೀಯ ಸಂಸ್ಥೆಯ ವ್ಯವಸ್ಥಾಪಕನು ಅಂಥ ಪರಿಶೀಲನೆಗೆ ಎಲ್ಲ ಸೂಕ್ತ ಸೌಲಭ್ಯಗಳನ್ನು ಒದಗಿಸತಕ್ಕದ್ದು.

9. **ಗುಣಮಟ್ಟಗಳು:–** (1) ಪ್ರತಿಯೊಂದು ಖಾಸಗಿ ವೈದ್ಯಕೀಯ ಸಂಸ್ಥೆಯು, ಸಿಬ್ಬಂದಿ ಮತ್ತು ಅವರ ವಿದ್ಯಾರ್ಹತೆಗಳು, ಶಸ್ತ್ರಚಿಕಿತ್ಸೆ ಕೊಠಡಿ, ಕಟ್ಟಡಗಳು, ಅವಶ್ಯಕ ಸ್ಥಳಾವಕಾಶ, ಸಲಕರಣೆಗಳು, ರೋಗಿಗಳಿಗೆ ಮತ್ತು ಅವರನ್ನು ನೋಡಿಕೊಳ್ಳುವವರಿಗೆ ಒದಗಿಸಬೇಕಾದ ಸೌಲಭ್ಯಗಳ ನಿರ್ವಹಣೆ ಹಾಗೂ ಇತರ ವಿಷಯಗಳಿಗೆ ಸಂಬಂಧಿಸಿದಂತೆ ಈ ಅಧಿನಿಯಮದಲ್ಲಿ ಅಥವಾ ಅದರಡಿಯಲ್ಲಿ ರಚಿಸಲಾದ ನಿಯಮಗಳಲ್ಲಿ ಅಥವಾ ಪ್ರಸ್ತುತ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ನಿಗದಿಪಡಿಸಲಾದ ಗುಣಮಟ್ಟಗಳನ್ನು ಪಾಲಿಸಿಕೊಂಡು ಬರತಕ್ಕದ್ದು. (2) ರಾಜ್ಯ ಸರ್ಕಾರವು ನಿರ್ಧರಿಸಿದಂತೆ ಬೇರೆ ಬೇರೆ ಪ್ರದೇಶಗಳಿಗೆ ಸಂಬಂಧಿಸಿದಂತೆ ಬೇರೆ ಬೇರೆ ಖಾಸಗಿ ವೈದ್ಯಕೀಯ ಸಂಸ್ಥೆಗಳಿಗೆ ಬೇರೆ ಬೇರೆ ಗುಣಮಟ್ಟಗಳನ್ನು ನಿಗದಿಪಡಿಸಬಹುದು. ಬೇರೆ ಬೇರೆ ಪ್ರದೇಶಗಳಿಗೆ ಖಾಸಗಿ ವೈದ್ಯಕೀಯ ಸಂಸ್ಥೆಗಳ ವಿವಿಧ ವರ್ಗ ಅಥವಾ ವರ್ಗಗಳಿಗೆ ಕಾಲಕಾಲಕ್ಕೆ ನಿಗದಿಪಡಿಸಬಹುದಾದ ಗುಣಮಟ್ಟಗಳನ್ನು ಸೂಚಿಸಲು ರಾಜ್ಯ ಸರ್ಕಾರವು ತಜ್ಞರ ಸಮಿತಿಗಳನ್ನು ರಚಿಸಬಹುದು. ತಜ್ಞರ ಸಮಿತಿಗಳ ಸಂಯೋಜನೆ, ಅಧಿಕಾರಗಳು ಮತ್ತು ಜವಾಬ್ದಾರಿಗಳು ಮತ್ತು ತಜ್ಞರ ಸಮಿತಿಯ ಸದಸ್ಯರುಗಳ ಸೇವಾ ನಿಬಂಧನೆಗಳು ಹಾಗೂ ಷರತ್ತುಗಳು ನಿಯಮಿಸಬಹುದಾದಂತೆ ಇರತಕ್ಕದ್ದು.

10. **ವಿಧಿಸುವ ಚಾರ್ಜುಗಳ ಪಟ್ಟಿಯನ್ನು ಪ್ರಕಟಿಸಬೇಕು:–** (1) ಪ್ರತಿಯೊಂದು ಖಾಸಗಿ ವೈದ್ಯಕೀಯ ಸಂಸ್ಥೆಯು ರೋಗಿಗಳ ಹಾಗೂ ಸಾಮಾನ್ಯ ಜನರ ತಿಳುವಳಿಕೆಗಾಗಿ ವಿವಿಧ ವೈದ್ಯಕೀಯ ಚಿಕಿತ್ಸೆಗಳಿಗೆ ಮತ್ತು ಇತರ ಸೇವೆಗಳಿಗೆ ಸಂದಾಯಮಾಡತಕ್ಕ ಚಾರ್ಜುಗಳ ಪಟ್ಟಿಯನ್ನು ಕಿರುಮಡಿಕೆಗಳು ಅಥವಾ ಕಿರಿಹೊತ್ತಿಗೆಗಳಲ್ಲಿ ಲಭ್ಯವಾಗುವಂತೆ ಮಾಡತಕ್ಕದ್ದು ಮತ್ತು ಅಂಥ ಚಾರ್ಜುಪಟ್ಟಿಯನ್ನು ಖಾಸಗಿ ವೈದ್ಯಕೀಯ ಸಂಸ್ಥೆಯ ಸೂಚನಾ ಫಲಕದಲ್ಲಿ ಪ್ರದರ್ಶಿಸತಕ್ಕದ್ದು. ಅಂಥ ಕಿರುಮಡಿಕೆ ಅಥವಾ ಕಿರಿಹೊತ್ತಿಗೆಯ ಪ್ರತಿಯನ್ನು ನೋಂದಣಿ ಪ್ರಾಧಿಕಾರಕ್ಕೆ ಕಳುಹಿಸತಕ್ಕದ್ದು. (2) ಯಾವ ಖಾಸಗಿ ವೈದ್ಯಕೀಯ ಸಂಸ್ಥೆಯು ರೋಗಿಯಿಂದ ಅಥವಾ ಆತನ ಸಂಬಂಧಿಯಿಂದ ಅಥವಾ ಅವರನ್ನು ನೋಡಿಕೊಳ್ಳುವವರಿಂದ ಕಿರುಮಡಿಕೆ ಅಥವಾ ಕಿರಿಹೊತ್ತಿಗೆಯಲ್ಲಿ ಮುದ್ರಿಸಿದ ಚಾರ್ಜಿಗಿಂತ ಹೆಚ್ಚುವರಿಯಾಗಿ ಮತ್ತು ವಿಧಿಸಿದ ಹಾಗೂ ಪಡೆದುಕೊಂಡು ಮೊಬಲಗಿಗೆ ಸರಿಯಾದ ರಸೀದಿಯನ್ನು ನೀಡದೇ ಯಾವುದೇ ಮೊತ್ತವನ್ನು ಸಂಗ್ರಹಿಸತಕ್ಕದ್ದಲ್ಲ.

11. **ಖಾಸಗಿ ವೈದ್ಯಕೀಯ ಸಂಸ್ಥೆಗಳ ಅವಶ್ಯ ಕರ್ತವ್ಯಗಳು:–** ಪ್ರತಿಯೊಂದು ಖಾಸಗಿ ವೈದ್ಯಕೀಯ ಸಂಸ್ಥೆಯು (i) ಸಂಸ್ಥೆಯ ಮುಂದೆ ತಾವಾಗಿಯೇ ಹಾಜರಾದ ಅಥವಾ ಯಾರಾದರೂ ಕರೆತಂದ ರಸ್ತೆ ಅಪಘಾತದ, ಆಕಸ್ಮಿಕ ಅಥವಾ ಉದ್ದೇಶ ಪೂರ್ವಕವಾಗಿ ಮಾಡಿದ ಸುಟ್ಟ ಗಾಯಗಳಾದ ಅಥವಾ ವಿಷ ಸೇವನೆಯ ಅಥವಾ ಕ್ರಿಮಿನಲ್ ಹಲ್ಲೆ ಮುಂತಾದವುಗಳಿಗೆ ಒಳಗಾದ ನೊಂದ ವ್ಯಕ್ತಿಗಳಂಥ ಎಲ್ಲಾ ವೈದ್ಯಕೀಯ–ಕಾನೂನು ಅಥವಾ ಸಂಭವನೀಯ

- ವೈದ್ಯಕೀಯ-ಕಾನೂನು ಪ್ರಕರಣಗಳಲ್ಲಿ ಅವಶ್ಯ ಪ್ರಥಮ ಚಿಕಿತ್ಸೆ ನೀಡತಕ್ಕದ್ದು ಮತ್ತು ಇತರ ಪ್ರಾಣ ಉಳಿಸುವ
ದೇಹಸ್ಥಿತಿ ಸ್ಥಿರಗೊಳಿಸುವ ತುರ್ತು ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು. (ii) ರಾಜ್ಯ ಸರ್ಕಾರವು ಕಾಲದಿಂದ ಕಾಲಕ್ಕೆ
ನಿರ್ದಿಷ್ಟಪಡಿಸಿದಂಥ ರೀತಿಯಲ್ಲಿ ಎಲ್ಲ ರಾಷ್ಟ್ರೀಯ ಮತ್ತು ರಾಜ್ಯ ಆರೋಗ್ಯ ಕಾರ್ಯಕ್ರಮಗಳ ಅನುಷ್ಠಾನದಲ್ಲಿ
ಸಕ್ರಿಯವಾಗಿ ಭಾಗವಹಿಸತಕ್ಕದ್ದು; ಮತ್ತು ಸಂಬಂಧಪಟ್ಟ ಪ್ರಾಧಿಕಾರಗಳಿಗೆ ಅದರ ಬಗ್ಗೆ ನಿಯತಕಾಲಿಕ ವರದಿಗಳನ್ನು
ಒದಗಿಸತಕ್ಕದ್ದು; (iii) ಸೋಂಕು ರೋಗಗಳಿಗೆ ಸಂಬಂಧಿಸಿದಂತೆ ಇತರ ವ್ಯಕ್ತಿಗಳಿಗೆ ರೋಗ ಹರಡದಂತೆ ತಡೆಗಟ್ಟಲು
ಶಾಸನಬದ್ಧ ಕರ್ತವ್ಯವನ್ನು ನಿರ್ವಹಿಸತಕ್ಕದ್ದು ಮತ್ತು ತಕ್ಷಣವೇ ಸಂಬಂಧಪಟ್ಟ ಸಾರ್ವಜನಿಕ ಆರೋಗ್ಯ
ಪ್ರಾಧಿಕಾರಗಳಿಗೆ ಅದನ್ನು ವರದಿಮಾಡತಕ್ಕದ್ದು. (iv) ರಾಜ್ಯಸರ್ಕಾರವು ಕಾಲಕಾಲಕ್ಕೆ ಅಧಿಸೂಚಿಸಬಹುದಾದಂಥ
ಸೋಂಕು ರಹಿತ ರೋಗಗಳಿಗೆ ಸಂಬಂಧಿಸಿದ ವಿವರಗಳನ್ನು ನೋಂದಣಿ ಪ್ರಾಧಿಕಾರಕ್ಕೆ ಒದಗಿಸತಕ್ಕದ್ದು

12. **ಚಿಕಿತ್ಸಾ ದಾಖಲೆಗಳ ನಿರ್ವಹಣೆ:-** (1) ಪ್ರತಿಯೊಂದು ಖಾಸಗಿ ವೈದ್ಯಕೀಯ ಸಂಸ್ಥೆಯು ತನ್ನ ರಕ್ಷಣೆಯಲ್ಲಿರುವ
ರೋಗಿಗಳಿಗೆ ಸಂಬಂಧಿಸಿದಂತೆ ತನ್ನ ಕಾರ್ಯಚಟುವಟಿಕೆಗಳ ವೈದ್ಯಕೀಯ ದಾಖಲೆಗಳನ್ನು ನಿಯಮಿತ ರೀತಿಯಲ್ಲಿ
ನಿರ್ವಹಿಸತಕ್ಕದ್ದು (2) ರಾಜ್ಯಸರ್ಕಾರದಿಂದ ಈ ಬಗ್ಗೆ ನಿರ್ದಿಷ್ಟ ಅಧಿಕಾರ ಪಡೆದ ಜಿಲ್ಲಾ ಸರ್ಜನ್ ಅಥವಾ ಇತರೆ
ಅಧಿಕಾರಿಯು ತನ್ನ ಕರ್ತವ್ಯಗಳನ್ನು ಯುಕ್ತವಾಗಿ ನಿರ್ವಹಿಸುವಾಗ, ಎಲ್ಲ ಚಿಕಿತ್ಸಾ ದಾಖಲೆಗಳನ್ನು ಪರಿಶೀಲನೆಗೆ
ಮುಕ್ತವಾಗಿರತಕ್ಕದ್ದು. (3) ಪ್ರತಿಯೊಬ್ಬ ವ್ಯಕ್ತಿಯು ಅಥವಾ ಅವನ ಕುಟುಂಬದ ಸದಸ್ಯನು ಯುಕ್ತ ವೆಚ್ಚಗಳನ್ನು
ಪಾವತಿಸಿ ತನಗೆ ಸಂಬಂಧಿಸಿದ ವೈದ್ಯಕೀಯ ದಾಖಲೆಯ ಪ್ರತಿಯನ್ನು ಪಡೆಯಲು ಹಕ್ಕುಳ್ಳವನಾಗಿರತಕ್ಕದ್ದು.

13. **ಮಾಹಿತಿಯನ್ನು ಪಡೆಯುವ ಪ್ರಕ್ರಿಯೆ-** (1) ಪ್ರತಿಯೊಂದು ವೈದ್ಯಕೀಯ ಸಂಸ್ಥೆಯು, ಒಬ್ಬ ವ್ಯಕ್ತಿಯು ಭೇಟಿ ನೀಡಿದ
ಅಥವಾ ದಾಖಲಾದ ಉದ್ದೇಶವು ಪೂರ್ಣಗೊಂಡ ತರುವಾಯ, ಆದಷ್ಟು ಬೇಗನೇ, ಆ ವ್ಯಕ್ತಿಗೆ ಅಥವಾ ಅವನ
ಕುಟುಂಬದ ಸದಸ್ಯನಿಗೆ ಆ ವ್ಯಕ್ತಿಗೆ ಸಂಬಂಧಿಸಿದ ನಿಗಾ, ಚಿಕಿತ್ಸೆ, ತಪಾಸಣೆ, ವಿಚಾರಣೆ, ಸಲಹೆ ಮತ್ತು ರೋಗನಿದಾನ
ಅಭಿಪ್ರಾಯಗಳ ಸಾರಾಂಶದ ಪ್ರತಿಯನ್ನು ಲಭ್ಯವಾಗುವಂತೆ ಮಾಡತಕ್ಕದ್ದು. (2) ತನ್ನ ಕರ್ತವ್ಯಗಳ ಯುಕ್ತ
ನಿರ್ವಹಣೆಯಲ್ಲಿ ಒಂದು ಸಾರ್ವಜನಿಕ ಪ್ರಾಧಿಕಾರವು, ಅಥವಾ ಸ್ವಯಂ ವ್ಯಕ್ತಿಯೇ ಅಥವಾ ಈ ಕಾರಣಕ್ಕಾಗಿ
ನಿರ್ದಿಷ್ಟವಾಗಿ ಅಧಿಕೃತನಾದ ಯಾವೊಬ್ಬ ಇತರ ವ್ಯಕ್ತಿ ಅಥವಾ ಸಂಬಂದಪಟ್ಟ ವ್ಯಕ್ತಿಯು ಅಪ್ರಾಪ್ತ ವಯಸ್ಕನಾಗಿದ್ದಲ್ಲಿ
ಅಥವಾ ಮೃತನಾಗಿದ್ದಲ್ಲಿ ಅಥವಾ (ತಾತ್ಕಾಲಿಕವಾಗಿ ಅಥವಾ ಶಾಶ್ವತವಾಗಿಯಾಗಲೀ) ಅಸಮರ್ಥನಾಗಿದ್ದಲ್ಲಿ ಆ
ವ್ಯಕ್ತಿಯ ಪ್ರಕರಣದಲ್ಲಿ ಅಧಿಕೃತನಾಗಿಲ್ಲದ ಆತನ ಕುಟುಂಬದ ಸದಸ್ಯನು, ಖಾಸಗಿ ವೈದ್ಯಕೀಯ ಸಂಸ್ಥೆಗೆ
ಅವಶ್ಯಕವಾದ ಶುಲ್ಕವನ್ನು ಪಾವತಿಸಿ ವೈದ್ಯಕೀಯ ದಾಖಲೆಗಳ ಪ್ರತಿಯನ್ನು ಕೋರಬಹುದು, ಖಾಸಗಿ ವೈದ್ಯಕೀಯ
ಸಂಸ್ಥೆಯು, ಏಳು ದಿನಗಳೊಳಗಾಗಿ, ಅಂಥ ಪ್ರತಿಯನ್ನು ಒದಗಿಸತಕ್ಕದ್ದು (3) ಪ್ರತಿಯೊಂದು ಖಾಸಗಿ ವೈದ್ಯಕೀಯ
ಸಂಸ್ಥೆಯು ಅಂಥ ಮಾಹಿತಿಯನ್ನು ಪಡೆಯುವುದಕ್ಕಾಗಿ ಚಾರ್ಜುಗಳನ್ನು ಎದ್ದುಕಾಣುವ ಸ್ಥಳದಲ್ಲಿ ಪ್ರದರ್ಶಿಸತಕ್ಕದ್ದು.

14. **ಮಾಹಿತಿಯನ್ನು ಒದಗಿಸುವುದಕ್ಕಾಗಿ ನಿರ್ಬಂಧಗಳು-** ಖಾಸಗಿ ವೈದ್ಯಕೀಯ ಸಂಸ್ಥೆಯ ವ್ಯವಸ್ಥಾಪಕನು,- (ಎ)
ಸಾರ್ವಜನಿಕ ಪ್ರಾಧಿಕಾರದ ನಿರ್ದೇಶನದ ಮೇಲೆ ಚಿಕಿತ್ಸಾ ಅಥವಾ ಪರೀಕ್ಷೆ ಅಥವಾ ನಿರ್ಧಾರಣೆಗಳನ್ನು ನಡೆಸಿದ್ದು
ಮತ್ತು ಮಾಹಿತಿಯನ್ನು ಸ್ವೀಕರಿಸುವ ಪ್ರಥಮ ಅಧಿಕಾರ ಅದಕ್ಕೆ ಇದೆಯೆಂದು; (ಬಿ) ವ್ಯಕ್ತಿಗೆ ನೀಡುವ ವರದಿಯು
ವ್ಯಕ್ತಿ ಅಥವಾ ಆತನ ಕುಟುಂಬದ ಸದಸ್ಯರುಗಳಿಗೆ ಬಾಧೆ ಉಂಟುಮಾಡುವುದೆಂದು,
ಆತನಿಗೆ ಮನವರಿಕೆಯಾದರೆ ಅಂಥ ಕಾರಣಗಳನ್ನು ಬರೆದು ದಾಖಲುಮಾಡಿ ಚಿಕಿತ್ಸೆ ದಾಖಲೆಗಳಿಗೆ ಸಂಬಂಧಿಸಿದ
ಮಾಹಿತಿಯನ್ನು ಒದಗಿಸಲು ತಿರಸ್ಕರಿಸಬಹುದು.

15. **ನೋಂದಣಿಯ ಅಮಾನತು ಅಥವಾ ರದ್ದತಿ.-** (1) ನೋಂದಣಿ ಪ್ರಾಧಿಕಾರವು, ದೂರಿನ ಆಧಾರದ ಮೇಲೆ ಅಥವಾ
ಅನ್ಯಥಾ, ಈ ಅಧಿನಿಯಮದ ಅಥವಾ ಅದರಡಿಯಲ್ಲಿ ರಚಿಸಿದ ನಿಯಮಗಳ ಅಥವಾ ನೋಂದಣಿಯ ಷರತ್ತುಗಳ
ಉಲ್ಲಂಘನೆಯಾಗಿದೆಯೆಂದು ಮೇಲ್ನೋಟಕ್ಕೆ ಕಂಡುಬಂದರೆ, ಲಿಖಿತದಲ್ಲಿ ಆದೇಶವನ್ನು ನೀಡುವ ಮೂಲಕ ಮತ್ತು
ಅದರಲ್ಲಿ—ಕಾರಣಗಳನ್ನು ಲಿಖಿತದಲ್ಲಿ ದಾಖಲಿಸುವ ಮೂಲಕ ಖಾಸಗಿ ವೈದ್ಯಕೀಯ ಸಂಸ್ಥೆಯ ನೋಂದಣಿಯನ್ನು
ಅಮಾನತುಗೊಳಿಸಬಹುದು ಅಥವಾ ರದ್ದುಗೊಳಿಸಬಹುದು:

ಪರಂತು, ಅಂಥ ಆದೇಶವನ್ನು ಖಾಸಗಿ ವೈದ್ಯಕೀಯ ಸಂಸ್ಥೆಯು ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು
ನೀಡಿದ ಹೊರತು ಹೊರಡಿಸತಕ್ಕದ್ದಲ್ಲ. (2) (1)ನೇ ಉಪ ಪ್ರಕರಣದ ಅಡಿಯಲ್ಲಿ ಹೊರಡಿಸಿದ ಪ್ರತಿಯೊಂದು
ಆದೇಶವು ಖಾಸಗಿ ವೈದ್ಯಕೀಯ ಸಂಸ್ಥೆಯ ಒಳರೋಗಿಗಳನ್ನು ಆದೇಶದಲ್ಲಿ ನಿರ್ದಿಷ್ಟಪಡಿಸಿದ ಇನ್ನೊಂದು ಖಾಸಗಿ
ವೈದ್ಯಕೀಯ ಸಂಸ್ಥೆಗೆ ವರ್ಗಾಯಿಸಬೇಕೆಂಬ ನಿರ್ದೇಶನವನ್ನು ಒಳಗೊಂಡಿರತಕ್ಕದ್ದು ಮತ್ತು ಅಂಥ ವರ್ಗಾವಣೆ
ಮಾಡುವವರೆಗೂ ಅಂಥ ಒಳರೋಗಿಗಳ ಆರೋಗ್ಯ ಪಾಲನೆ ಹಾಗೂ ಅಭಿರಕ್ಷಣೆ ಕುರಿತ ಉಪಬಂಧಗಳನ್ನು ಸಹ
ಒಳಗೊಂಡಿರತಕ್ಕದ್ದು. (3) (1)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಿದ ಪ್ರತಿಯೊಂದು ಆದೇಶವು. (ಎ) 17ನೇ
ಪ್ರಕರಣದ ಅಡಿಯಲ್ಲಿ ಅಂಥ ಆದೇಶದ ವಿರುದ್ಧ ಯಾವ ಅಪೀಲನ್ನೂ ಸಲ್ಲಿಸದಿದ್ದಾಗ, ಅಂಥ ಅಪೀಲು ಸಲ್ಲಿಸಲು
ನಿರ್ದಿಷ್ಟಪಡಿಸಿದ ಅವಧಿಯು ಮುಕ್ತಾಯವಾದ ಕೂಡಲೆ; ಮತ್ತು (ಬಿ) ಅಂಥ ಅಪೀಲನ್ನು ಸಲ್ಲಿಸಿದ್ದು ಅದು ವಜಾ
ಆಗಿರುವಾಗ ಹಾಗೆ ವಜಾ ಮಾಡಿದ ಆದೇಶದ ದಿನಾಂಕದಿಂದ ಪ್ರ[illegible]ತಕ್ಕದ್ದು.

16. **ಅಪೀಲು ಪ್ರಾಧಿಕಾರ.-** ಈ ಮುಂದಿನ ಸದಸ್ಯರನ್ನು ಒಳಗೊಂಡ ಒಂದು ಅಪೀಲು ಪ್ರಾಧಿಕಾರವು ಇರತಕ್ಕದ್ದು ಎಂದರೆ:-

(ಎ) ಕರ್ನಾಟಕ ಆರೋಗ್ಯ ಮತ್ತು ಕುಟುಂಬ ಕಲ್ಯಾಣದ ಆಯುಕ್ತರು - ಅಧ್ಯಕ್ಷರು

(ಬಿ) ಕರ್ನಾಟಕ ಆರೋಗ್ಯ ಸೇವೆಗಳ ನಿರ್ದೇಶಕರು - ಸದಸ್ಯರು

(ಸಿ) ಭಾರತೀಯ ವೈದ್ಯಪದ್ಧತಿ ಮತ್ತು ಹೋಮಿಯೋಪತಿ ನಿರ್ದೇಶಕರು - ಸದಸ್ಯರು

- **ಸೂಚನೆ:-** ಆರೋಗ್ಯ ಸೇವೆಗಳ ನಿರ್ದೇಶಕರು, ಕರ್ನಾಟಕ ಇವರು ಖಾಸಗಿ ವೈದ್ಯಕೀಯ ಸಂಸ್ಥೆಯಲ್ಲಿ ರೋಗಿಗೆ
ಅಲೋಪತಿ ಪದ್ಧತಿಯಲ್ಲಿ ಚಿಕಿತ್ಸೆ ನೀಡಿರುವ ಸಂದರ್ಭದಲ್ಲಿಯ ಅಪೀಲಿನ ಸಂಬಂಧದಲ್ಲಿ ಸದಸ್ಯರಾಗಿರತಕ್ಕದ್ದು ಮತ್ತು
ಭಾರತೀಯ ವೈದ್ಯಕೀಯ ಮತ್ತು ಹೋಮಿಯೋಪತಿ ನಿರ್ದೇಶಕರು ಇವರು ಇತರ ಖಾಸಗಿ ವೈದ್ಯಕೀಯ ಸಂಸ್ಥೆಯು
ರೋಗಿಗೆ ಆಯುರ್ವೇದ, ಯುನಾನಿ, ಹೋಮಿಯೋಪತಿ, ಯೋಗ, ಪ್ರಕೃತಿಚಿಕಿತ್ಸೆ ಅಥವಾ ಸಿದ್ಧಪದ್ಧತಿಯಲ್ಲಿ ಚಿಕಿತ್ಸೆ
ನೀಡುತ್ತಿರುವ ಸಂದರ್ಭದಲ್ಲಿಯ ಅಪೀಲಿನ ಸಂಬಂಧದಲ್ಲಿ ಸದಸ್ಯರಾಗಿರತಕ್ಕದ್ದು.

17. **ಅಪೀಲು.-** (1) 24ನೇ ಪ್ರಕರಣದ ಅಡಿಯಲ್ಲಿ ಹೊರಡಿಸಿದ ಆದೇಶದ ಸಂದರ್ಭದಲ್ಲಿ ಹೊರತು 7ನೇ ಪ್ರಕರಣದ
ಅಡಿಯಲ್ಲಿ ನೋಂದಣಿಯ ಅರ್ಜಿಯನ್ನು ತಿರಸ್ಕರಿಸಿದ ಅಥವಾ 15ನೇ ಪ್ರಕರಣದ ಅಡಿಯಲ್ಲಿ ನೋಂದಣಿಯನ್ನು
ಅಮಾನತುಗೊಳಿಸಲಾದ ಅಥವಾ ರದ್ದುಗೊಳಿಸಲಾದ ಅಥವಾ ಈ ಅಧಿನಿಯಮದ ಅಡಿಯಲ್ಲಿ ಹೊರಡಿಸಿದ
ಯಾವುದೇ ಮೂಲ ಆದೇಶದಿಂದ ಬಾಧಿತವಾದ ಖಾಸಗಿ ವೈದ್ಯಕೀಯ ಸಂಸ್ಥೆಯು ನಿಯಮಿಸಬಹುದಾದಂಥ
ವಿಧಾನದಲ್ಲಿ ಮತ್ತು ಅಂಥ ಫೀಜನ್ನು ಸಂದಾಯಮಾಡಿ ಅಪೀಲು ಪ್ರಾಧಿಕಾರಕ್ಕೆ ಅಪೀಲನ್ನು ಸಲ್ಲಿಸಬಹುದು.
(2) ಅಂಥ ಪ್ರತಿಯೊಂದು ಅಪೀಲನ್ನು ಯಾವ ಆದೇಶದ ವಿರುದ್ಧ ಅಪೀಲು ಸಲ್ಲಿಸಲಾಗಿದೆಯೋ ಆ ಆದೇಶವನ್ನು
ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ಸಲ್ಲಿಸತಕ್ಕದ್ದು. (3) ಅಪೀಲು ಪ್ರಾಧಿಕಾರವು ವಿಚಾರಣೆಯನ್ನು
ನಡೆಸಿದ ತರುವಾಯ, ಅಪೀಲು ಸಲ್ಲಿಸಿದ ದಿನಾಂಕದಿಂದ ಸಾಧ್ಯವಾದಷ್ಟು ಅರವತ್ತು ದಿನಗಳೊಳಗೆ ತಾನು
ಸೂಕ್ತವೆಂದು ಭಾವಿಸಬಹುದಾದಂಥ ಆದೇಶವನ್ನು ಹೊರಡಿಸತಕ್ಕದ್ದು.

18. **ಖಾಸಗಿ ವೈದ್ಯಕೀಯ ಸಂಸ್ಥೆಗಳು ತಮ್ಮಲ್ಲಿರುವ ಸರ್ಕಾರಿ ವೈದ್ಯರುಗಳ ಹೆಸರುಗಳನ್ನು ವರದಿಮಾಡುವುದು.-** ಪ್ರತಿಯೊಂದು
ಖಾಸಗಿ ವೈದ್ಯಕೀಯ ಸಂಸ್ಥೆಯು ಸಮಾಲೋಚನೆಗಾಗಿ ಅಥವಾ ಯಾವುದೇ ಇತರೆ ಆಧಾರದ ಮೇಲೆ, ಹಣಸಂದಾಯ
ಮಾಡುವ ಮೂಲಕವಾಗಲಿ ಅಥವಾ ಇಲ್ಲದಿರಲಿ, ಸೇವೆಸಲ್ಲಿಸಲು ಬಳಸಿಕೊಳ್ಳುತ್ತಿರುವ ತಮ್ಮಲ್ಲಿನ ಸರ್ಕಾರಿ
ವೈದ್ಯರುಗಳ ಮತ್ತು ಅರೆ ವೈದ್ಯಕೀಯ ಸಿಬ್ಬಂದಿಯವರ ಹೆಸರುಗಳನ್ನು ರಾಜ್ಯ ಸರ್ಕಾರಕ್ಕೆ ಮತ್ತು ನೋಂದಣಿ
ಪ್ರಾಧಿಕಾರಕ್ಕೆ ವರದಿಮಾಡತಕ್ಕದ್ದು.

**19. ದಂಡನೆಗಳು,-** (1) ಯಾವೊಬ್ಬ ವ್ಯಕ್ತಿಯು 7ನೇ ಪ್ರಕರಣದ ಅಡಿಯಲ್ಲಿ ಮಂಜೂರು ಮಾಡಲಾಗುವ ನೋಂದಣಿ ಇಲ್ಲದ ಒಂದು ಖಾಸಗಿ ವೈದ್ಯಕೀಯ ಸಂಸ್ಥೆಯನ್ನು ಸ್ಥಾಪಿಸಿದಲ್ಲಿ, ನಡೆಸುತ್ತಿದ್ದಲ್ಲಿ ಅಥವಾ ನಿರ್ವಹಿಸುತ್ತಿದ್ದಲ್ಲಿ, ಅವನು, ಅಪರಾಧ ನಿರ್ಣಯವಾದ ನಂತರ ಮೂರು ವರ್ಷಗಳಿಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸ ಶಿಕ್ಷೆಯಿಂದ ಮತ್ತು ಹತ್ತು ಸಾವಿರ ರೂಪಾಯಿಗಳ ವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕದ್ದು. (2) ಒಬ್ಬ ವ್ಯಕ್ತಿಯು, (1)ನೇ ಉಪ-ಪ್ರಕರಣದ ಅಡಿಯಲ್ಲಿ ನಿರ್ಣಿತ ಅಪರಾಧಿಯಾಗಿದ್ದಲ್ಲಿ, ನೋಂದಣಿ ಪ್ರಾಧಿಕಾರವು, ಅಂಥ ನೋಂದಾಯಿತವಲ್ಲದ ಖಾಸಗಿ ವೈದ್ಯಕೀಯ ಸಂಸ್ಥೆಯನ್ನು, ಅಂಥ ನೋಂದಣಿಯು ರದ್ದು ಅಥವಾ ಅಮಾನತುಗೊಂಡಿದ್ದು ಅಂಥ ರದ್ದತಿ ಅಥವಾ ಅಮಾನತಿನ ವಿರುದ್ಧ ದಾಖಲಿಸಲಾದ ಅಪೀಲು ಇತ್ಯರ್ಥದಲ್ಲಿದ್ದ ಹೊರತು ಅದನ್ನು ಕೂಡಲೇ ಮುಚ್ಚುವಂತೆ ಆದೇಶಿಸತಕ್ಕದ್ದು. (3) (1)ನೇ ಉಪ-ಪ್ರಕರಣದ ಅಡಿಯಲ್ಲಿ ಮಾಡಿದ ಪ್ರತಿಯೊಂದು ಆದೇಶವು, ಅಂಥ ನೋಂದಾಯಿತವಲ್ಲದ ಖಾಸಗಿ ವೈದ್ಯಕೀಯ ಸಂಸ್ಥೆಯ ಒಳರೋಗಿಗಳನ್ನು ಆ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಇತರ ಖಾಸಗಿ ವೈದ್ಯಕೀಯ ಸಂಸ್ಥೆಗೆ ವರ್ಗಾಯಿಸತಕ್ಕದ್ದೆಂದು ನಿರ್ದೇಶನದಲ್ಲಿ ತಿಳಿಸತಕ್ಕದ್ದು ಮತ್ತು ಅದು, ಅಂಥ ವರ್ಗಾವಣೆ ಮಾಡುವವರೆಗೂ ಒಳರೋಗಿಗಳ ಸುರಕ್ಷತೆ ಮತ್ತು ಅಭಿರಕ್ಷೆಗೆ ಸಂಬಂಧಪಟ್ಟ ಇತರ ಉಪಬಂಧಗಳನ್ನು ಸಹ ಒಳಗೊಂಡಿರತಕ್ಕದ್ದು. (4) ಯಾವೊಬ್ಬ ವ್ಯಕ್ತಿಯು, ನೋಂದಣಿಯ ಷರತ್ತುಗಳನ್ನು ಉಲ್ಲಂಘಿಸಿ ಅಥವಾ 12 ಅಥವಾ 13ನೇ ಪ್ರಕರಣದ ಉಪಬಂಧಗಳನ್ನು ಉಲ್ಲಂಘಿಸಿ ಒಂದು ವೈದ್ಯಕೀಯ ಸಂಸ್ಥೆಗಳನ್ನು ನಡೆಸುತ್ತಿದ್ದಲ್ಲಿ ಅಥವಾ ನಿರ್ವಹಿಸುತ್ತಿದ್ದಲ್ಲಿ ಅಥವಾ (2)ನೇ ಉಪ-ಪ್ರಕರಣದ ಅಡಿಯಲ್ಲಿ ಹೊರಡಿಸಲಾದ ನಿರ್ದೇಶನಗಳನ್ನು ಪಾಲಿಸಲು ವಿಫಲನಾದಲ್ಲಿ ಅವನು, ಅಪರಾಧ ನಿರ್ಣಿತನಾದ ತರುವಾಯ, ಆರು ತಿಂಗಳುಗಳಿಗೆ ವಿಸ್ತರಿಸಬಹುದಾದ ಅವಧಿಗಾಗಿ ಕಾರಾವಾಸ ಶಿಕ್ಷೆಯಿಂದ ಮತ್ತು ಎರಡು ಸಾವಿರ ರೂಪಾಯಿಗಳಿಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕದ್ದು ಮತ್ತು ಎರಡನೇ ಅಥವಾ ತರುವಾಯದ ಅಪರಾಧದ ಸಂದರ್ಭದಲ್ಲಿ, ಒಂದು ವರ್ಷದ ಅವಧಿಯವರೆಗೆ ವಿಸ್ತರಿಸಬಹುದಾದ ಕಾರಾವಾಸ ಶಿಕ್ಷೆಯಿಂದ ಮತ್ತು ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕದ್ದು. (5) ಒಬ್ಬ ವ್ಯಕ್ತಿಯು, ಈ ಅಧಿನಿಯಮದ ಅಥವಾ ಅದರಡಿಯಲ್ಲಿ ರಚಿಸಲಾದ ನಿಯಮದ ಯಾವುದೇ ಇತರ ಉಪಬಂಧಗಳನ್ನು ಉಲ್ಲಂಘಿಸಿದಲ್ಲಿ ಅವನು, ಅಪರಾಧ ನಿರ್ಣಯವಾದ ನಂತರ, ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡನೀಯನಾಗತಕ್ಕದ್ದು.

**20. ಕಂಪನಿಯಿಂದ ಅಪರಾಧಗಳು:-** (1) ಈ ಅಧಿನಿಯಮದ ಅಥವಾ ಅದರಡಿಯಲ್ಲಿ ಮಾಡಿದ ಯಾವುದೇ ನಿಯಮದ, ಯಾವುದೇ ಉಪಬಂಧಗಳ ವಿರುದ್ಧ ಅಪರಾಧವನ್ನು ಒಂದು ಕಂಪನಿಯು ಮಾಡಿರುವಲ್ಲಿ, ಅಪರಾಧವು ನಡೆದ ಸಮಯದಲ್ಲಿ, ಕಂಪನಿಯ ವ್ಯವಹಾರದ ಪ್ರಭಾರದಲ್ಲಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು ಹಾಗೂ ಕಂಪನಿಯನ್ನು ಆ ಅಪರಾಧದ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ತದನುಸಾರವಾಗಿ ಅವರು ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ದಂಡಿತನಾಗತಕ್ಕದ್ದು.

ಪರಂತು, ಅಪರಾಧವು, ತನ್ನ ತಿಳುವಳಿಕೆಗೆ ಬಾರದೇ ನಡೆಯಿತೆಯಿಂದ ಅಥವಾ ಅಂಥ ಅಪರಾಧ ನಡೆಯುವುದನ್ನು ತಡೆಗಟ್ಟಲು ತಾನು ಯಥೋಚಿತವಾದ ಎಲ್ಲಾ ಜಾಗರೂಕತೆಯನ್ನು ವಹಿಸಿದ್ದೆನೆಂದು ಅಂಥ ವ್ಯಕ್ತಿಯು ರುಜುವಾತುಪಡಿಸಿದರೆ, ಈ ಅಧಿನಿಯಮದಲ್ಲಿ ಉಪಬಂಧಿಸಿದ ಈ ಉಪ-ಪ್ರಕರಣದಲ್ಲಿರುವುದಾವುದೂ, ಯಾವುದೇ ದಂಡನೆಗೆ ಅವನನ್ನು ಗುರಿಪಡಿಸತಕ್ಕದ್ದಲ್ಲ. (2) (1)ನೇ ಉಪ-ಪ್ರಕರಣದಲ್ಲಿ ಏನೇ ಇದ್ದರೂ, ಈ ಅಧಿನಿಯಮದ ಅಡಿಯಲ್ಲಿನ ಯಾವುದೇ ಅಪರಾಧವನ್ನು ಕಂಪನಿಯು ಮಾಡಿರುವಲ್ಲಿ ಮತ್ತು ಆ ಅಪರಾಧವು ಕಂಪನಿಯ ಯಾವೊಬ್ಬ ನಿರ್ದೇಶಕನ, ವ್ಯವಸ್ಥಾಪಕನ, ಕಾರ್ಯದರ್ಶಿಯ ಅಥವಾ ಕಂಪನಿಯ ಇತರ ಅಧಿಕಾರಿಯ ಸಮ್ಮತಿಯಿಂದ ಅಥವಾ ಪರೋಕ್ಷ ಸಮ್ಮತಿಯಿಂದ ನಡೆಯಿತೆಂದು ಅಥವಾ ಕಂಪನಿಯ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯ ಯಾವುದೇ ನಿರ್ಲಕ್ಷತೆಯ ಕಾರಣದಿಂದ ನಡೆಯಿತೆಂದು ರುಜುವಾತು ಪಡಿಸಲಾದಲ್ಲಿ ಅವನನ್ನು ಈ ಅಪರಾಧದ ತಪ್ಪಿತಸ್ಥನೆಂದು ಭಾವಿಸತಕ್ಕದ್ದು ಮತ್ತು ತದನುಸಾರವಾಗಿ ಅವನು ವ್ಯವಹರಣೆಗೆ ಗುರಿಯಾಗತಕ್ಕದ್ದು ಮತ್ತು ದಂಡಿತನಾಗತಕ್ಕದ್ದು.

**ವಿವರಣೆ:** ಈ ಪ್ರಕರಣದ ಉದ್ದೇಶಕ್ಕಾಗಿ,-

(ಎ) "ಕಂಪನಿ" ಎಂದರೆ, ಯಾವುದೇ ನಿಗಮಿತ ನಿಕಾಯ ಮತ್ತು ಅದು ಒಂದು ನ್ಯಾಸ, ಫರ್ಮ್ ಸಂಘ ಅಥವಾ ವ್ಯಕ್ತಿಗಳ ಇತರ ಸಂಘವನ್ನು ಒಳಗೊಳ್ಳುತ್ತದೆ: ಮತ್ತು (ಬಿ) **"ನಿರ್ದೇಶಕ"** ಎಂದರೆ:- (1) ಫರ್ಮಿನ ಸಂಬಂಧದಲ್ಲಿ, ಫರ್ಮ್‌ನಲ್ಲಿರುವ ಒಬ್ಬ ಪಾಲುದಾರ: (2) ಒಂದು ಸಂಘ, ಒಂದು ನ್ಯಾಸ ಅಥವಾ ವ್ಯಕ್ತಿಗಳ ಇತರ ಸಂಘ ಎಂದರೆ, ಸಂಘ, ನ್ಯಾಸ ಅಥವಾ ಇತರ ಸಂಘದ ನಿಯಮಗಳ ಅಡಿಯಲಿ ವಹಿಸಿಕೊಡಲಾದ, ಸಂದರ್ಭಾನುಸಾರ ಸಂಘದ, ನ್ಯಾಸ ಅಥವಾ ಇತರ ಸಂಘದ ವ್ಯವಹಾರಗಳ ವ್ಯವಸ್ಥಾಪನೆಯಲ್ಲಿ ತೊಡಗಿಸಿಕೊಂಡವರು.

**21. ಪ್ರವೇಶ, ಪರಿಶೀಲನೆ ಇತ್ಯಾದಿಗಳ ಅಧಿಕಾರ:-** (1) ನಿಯಮಿಸಬಹುದಾದಂತ ನಿಯಮಗಳಿಗೆ ಒಳಪಟ್ಟು, ರಾಜ್ಯಸರ್ಕಾರವು, ರಾಜ್ಯಸರ್ಕಾರದ ಯಾವೊಬ್ಬ ಅಧಿಕಾರಿಯನ್ನು ವಿಶೇಷವಾಗಿ ಈ ಮುಂದಿನವುಗಳಿಗಾಗಿ ಪ್ರಾಧಿಕೃತಗೊಳಿಸಬಹುದು (ಇನ್ನು ಮುಂದೆ ಈ ಪ್ರಕರಣದಲ್ಲಿ ಮತ್ತು 22ನೇ ಪ್ರಕರಣದಲ್ಲಿ ಪ್ರಾಧಿಕೃತ ಅಧಿಕಾರಿ ಎಂದು ಉಲ್ಲೇಖಿಸಲಾಗಿದೆ),- (ಎ) ಎಲ್ಲಾ ಸಮಂಜಸ ಸಮಯದಲ್ಲೂ ಮತ್ತು ಅವನು ಯುಕ್ತವೆಂದು ಯೋಚಿಸಬಹುದಾದಂತೆ ರಾಜ್ಯಸರ್ಕಾರಿ ಸೇವೆಯಲ್ಲಿರುವ ವ್ಯಕ್ತಿಗಳಾದಂಥ ಸಹಾಯಕರ ನೆರವು ಯಾವುದಾದರೂ ಇದ್ದಲ್ಲಿ ಅದರೊಂದಿಗೆ, ಖಾಸಗಿ ವೈದ್ಯಕೀಯ ಸಂಸ್ಥೆ ಎಂದು ಬಳಸಲಾಗುವ ಅಥವಾ ಬಳಸಲಾಗುತ್ತಿದೆ ಎಂಬ ನಂಬಿಕೆಗೆ ಕಾರಣವಾದ ಯಾವುದೇ ಸ್ಥಳವನ್ನು ಪ್ರವೇಶಿಸುವುದು ಮತ್ತು ಪರಿಶೀಲಿಸುವುದು: (ಬಿ) ಖಾಸಗಿ ವೈದ್ಯಕೀಯ ಸಂಸ್ಥೆಯ ಆವರಣಗಳನ್ನು ಮತ್ತು ಅದರಲ್ಲಿ ಕಂಡುಬರುವ ಯಾವುದೇ ರಿಜಿಸ್ಟರು, ದಾಖಲೆ, ಸಾಧನ ಸಲಕರಣೆ ವಸ್ತುಗಳು ಅಥವಾ ದಸ್ತಾವೇಜುಗಳನ್ನು ಪರಿಶೀಲಿಸುವುದು ಮತ್ತು ಪರಿಶೀಲನೆಯ ವಿಶ್ಲೇಷಣೆ ಅಥವಾ ತನಿಖೆಯ ಉದ್ದೇಶಕ್ಕಾಗಿ ತಾನು ಅವಶ್ಯಕವೆಂದು ಭಾವಿಸಬಹುದಾದಂಥ ಯಾವುದೇ ದಸ್ತಾವೇಜು ಅಥವಾ ದಾಖಲೆಯನ್ನು ಮುಟ್ಟುಗೋಲು ಹಾಕಿಕೊಳ್ಳಬಹುದು ಮತ್ತು ಅಂಥ ಉದ್ದೇಶಕ್ಕಾಗಿ ತನಗೆ ಅಗತ್ಯವೆಂದು ಭಾವಿಸಬಹುದಾದಷ್ಟು ಅವಧಿಯವರೆಗೆ ಅವುಗಳನ್ನು ತನ್ನಲ್ಲಿ ಉಳಿಸಿಕೊಳ್ಳುವುದು, ಪರಂತು, ಪ್ರಾಧಿಕೃತ ಅಧಿಕಾರಿಯು, ದಸ್ತಾವೇಜುಗಳು ಮತ್ತು ದಾಖಲೆಗಳನ್ನು ಮುಟ್ಟುಗೋಲು ಹಾಕಿಕೊಂಡ ತರುವಾಯ ಕಾರ್ಯಸಾಧ್ಯವಾದಷ್ಟು ಬೇಗನೇ ಖಾಸಗಿ ವೈದ್ಯಕೀಯ ಸಂಸ್ಥೆಯ ವ್ಯವಸ್ಥಾಪಕನಿಗೆ ಅಂಥ ಮುಟ್ಟುಗೋಲು ಹಾಕಿಕೊಂಡ ಬಗ್ಗೆ ಸೂಕ್ತ ಕಾರಣಗಳನ್ನು ತಿಳಿಸತಕ್ಕದ್ದು. (ಸಿ) ಅಂಥ ವಿಚಾರಣೆಯನ್ನು ನಡೆಸುವುದು ಮತ್ತು ಸ್ಥಳದಲ್ಲೇ ತೀರ್ಮಾನ ಕೈಗೊಳ್ಳಬಹುದು ಅಥವಾ ಅನ್ಯಥ ತಾನು ಅವಶ್ಯಕವೆಂದು ಭಾವಿಸಬಹುದಾಂಥ ಯಾವೊಬ್ಬ ವ್ಯಕ್ತಿಯ ಹೇಳಿಕೆಯನ್ನು ತೆಗೆದುಕೊಳ್ಳುವುದು. (ಡಿ) ಈ ಅಧಿನಿಯಮದ ಉದ್ದೇಶಗಳನ್ನು ಕೈಗೊಳ್ಳುವುದಕ್ಕಾಗಿ, ಅವಶ್ಯಕವೆಂದು ಭಾವಿಸಬಹುದಾದಂಥ ಇತರ ಅಧಿಕಾರಿಗಳನ್ನು ಚಲಾಯಿಸುವುದು:

ಪರಂತು, ಯಾವೊಬ್ಬ ವ್ಯಕ್ತಿಯನ್ನು, ಈ ಉಪ-ಪ್ರಕರಣದ ಅಡಿಯಲ್ಲಿ ಯಾವುದೇ ಪ್ರಶ್ನೆಗೆ ಉತ್ತರಿಸಲು ಅಗತ್ಯಪಡಿಸತಕ್ಕದ್ದಲ್ಲ ಅಥವಾ ತನ್ನನ್ನು ಸ್ವತಃ ಅಪರಾಧಿ ಎಂದು ಸಿಕ್ಕಿಸುವ ಪ್ರವೃತ್ತಿಯುಳ್ಳ ಯಾವುದೇ ಸಾಕ್ಷ್ಯವನ್ನು ನೀಡುವಂತೆ ಅಗತ್ಯಪಡಿಸತಕ್ಕದ್ದಲ್ಲ: ಮತ್ತು ಪರಂತು, ಯಾವುದೇ ವಸತಿ ಸ್ಥಳವನ್ನು (ಖಾಸಗಿ ವೈದ್ಯಕೀಯ ಸಂಸ್ಥೆ-ಹಾಗೂ-ವಸತಿಗೃಹವಲ್ಲದ್ದು) ಮತ್ತು ಆ ಪ್ರದೇಶದ ಅಧಿಕಾರ ವ್ಯಾಪ್ತಿಯುಳ್ಳ ಮ್ಯಾಜಿಸ್ಟ್ರೇಟನು ನೀಡಿದ ಶೋಧನಾ ವಾರೆಂಟನ್ನು ಪ್ರಾಧಿಕಾರಿಯು ಹೊಂದಿದ್ದ ಹೊರತು, ಪ್ರಾಧಿಕೃತ ಅಧಿಕಾರಿಯು ಪ್ರವೇಶಿಸತಕ್ಕದ್ದಲ್ಲ ಮತ್ತು ಪರಿಶೋಧಿಸತಕ್ಕದ್ದಲ್ಲ ಮತ್ತು ಈ ಪ್ರಕರಣದ ಅಡಿಯಲ್ಲಿಯ ಎಲ್ಲ ಶೋಧನೆಗಳು ಮತ್ತು ಮುಟ್ಟುಗೋಲುಗಳನ್ನು ಸಾಧ್ಯವಾದಷ್ಟು ದಂಡ ಪ್ರಕ್ರಿಯಾ ಸಂಹಿತೆ, 1973ರ (1974ರ ಕೇಂದ್ರ ಅಧಿನಿಯಮ (2) ಉಪಬಂಧಗಳಿಗೆ ಅನುಸಾರವಾಗಿ ಮಾಡತಕ್ಕದ್ದು. (2) ಪ್ರಾಧಿಕೃತ ಅಧಿಕಾರಿಯು (1)ನೇ ಉಪಪ್ರಕರಣದ ಅಡಿಯಲ್ಲಿ ತಾನು ಮಾಡಿದ ತಪಾಸಣೆ, ಶೋಧನೆ ಮತ್ತು ಮುಟ್ಟುಗೋಲಿನ ಫಲಿತಾಂಶಗಳಿಗೆ ಸಂಬಂಧಿಸಿದಂತೆ ನೋಂದಣಿ ಪ್ರಾಧಿಕಾರಿಗೆ ವರದಿಯನ್ನು ಸಲ್ಲಿಸತಕ್ಕದ್ದು ಮತ್ತು ನೋಂದಣಿ ಪ್ರಾಧಿಕಾರಿಯು ಈ ಅಧಿನಿಯಮದ ಅಡಿಯಲ್ಲಿ ಸದರಿ ವರದಿಯ ಮೇಲೆ ಸೂಕ್ತ ಕ್ರಮ ಕೈಗೊಳ್ಳತಕ್ಕದ್ದು.

**22. ನೋಂದಾಯಿತವಲ್ಲದ ಖಾಸಗಿ ವೈದ್ಯಕೀಯ ಸಂಸ್ಥೆಯ ಆವರಣಗಳನ್ನು ಸೀಲ್ ಮಾಡುವುದು.-** (1) 19ನೇ ಪ್ರಕರಣದ ಉಪಬಂಧಗಳಿಗೆ ಬಾಧಕವಾಗದಂತೆ, 21ನೇ ಪ್ರಕರಣದ (1)ನೇ ಉಪ-ಪ್ರಕರಣದ ಅಡಿಯಲ್ಲಿ ಪ್ರಾಧಿಕೃತ

ಅಧಿಕಾರಿಯು ಮಾಡಿದ ವರದಿಯ ಆಧಾರದ ಮೇಲೆ ಅಥವಾ ಅನ್ಯಥಾ 7ನೇ ಪ್ರಕರಣದ ಅಡಿಯಲ್ಲಿ ಯಾವುದೇ ಖಾಸಗಿ ವೈದ್ಯಕೀಯ ಸಂಸ್ಥೆಯನ್ನು ನೋಂದಣಿ ಮಾಡದೇ ನಡೆಸಲಾಗುತ್ತಿದೆ ಅಥವಾ ನಿರ್ವಹಿಸಲಾಗುತ್ತಿದೆ ಎಂದು ನೋಂದಣಿ ಅಧಿಕಾರಿಯು ಅಭಿಪ್ರಾಯಪಟ್ಟಲ್ಲಿ, ಅಂಥ ಖಾಸಗಿ ಸಂಸ್ಥೆಯನ್ನು ಕೂಡಲೇ ಮುಚ್ಚುವಂತೆ ಆದೇಶಿಸಬಹುದು ಮತ್ತು ಆವರಣವನ್ನು ಮೊಹರು ಬಂದ್ ಸಹ ಮಾಡಬಹುದು;

ಪರಂತು, ಈ ಉಪ-ಪ್ರಕರಣದ ಅಡಿಯಲ್ಲಿ ಯಾವುದೇ ಆದೇಶವನ್ನು, ತೊಂದರೆಗೊಳಗಾಗಿರಬಹುದಾದ ವ್ಯಕ್ತಿಗೆ ಅವನ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ನೀಡಿದ್ದ ಹೊರತು ಮಾಡತಕ್ಕದ್ದಲ್ಲ. (2) (1)ನೇ ಉಪ-ಪ್ರಕರಣದ ಅಡಿಯಲ್ಲಿ ಮಾಡಿದ ಪ್ರತಿಯೊಂದು ಆದೇಶವು ಅಂಥ ನೋಂದಾಯಿತವಲ್ಲದ ಖಾಸಗಿ ವೈದ್ಯಕೀಯ ಸಂಸ್ಥೆಯ ಒಳರೋಗಿಗಳನ್ನು ಆ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಇತರೆ ಖಾಸಗಿ ವೈದ್ಯಕೀಯ ಸಂಸ್ಥೆಗೆ ವರ್ಗಾಯಿಸತಕ್ಕದ್ದೆಂದು ನಿರ್ದೇಶನವನ್ನು ಒಳಗೊಂಡಿರತಕ್ಕದ್ದು ಮತ್ತು ಅದು, ಅಂಥ ವರ್ಗಾವಣೆ ಮಾಡುವವರೆಗೊ ಒಳರೋಗಿಗಳ ಸುರಕ್ಷತೆ ಮತ್ತು ಅಭಿರಕ್ಷೆಗೆ ಸಂಬಂಧಪಟ್ಟ ಉಪಬಂಧಗಳನ್ನು ಸಹ ಒಳಗೊಂಡಿರತಕ್ಕದ್ದು.

23. **ನೋಂದಣಿ ಅಧಿಕಾರಿಗಳಿಗೆ ನಿರ್ದೇಶನ ನೀಡಲು ರಾಜ್ಯಸರ್ಕಾರದ ಅಧಿಕಾರಗಳು.**- ರಾಜ್ಯ ಸರ್ಕಾರವು, ತನ್ನ ಅಭಿಪ್ರಾಯದಲ್ಲಿ ಅವಶ್ಯಕವೆಂದು ಅಥವಾ ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತ ಗೊಳಿಸುವುದಕ್ಕಾಗಿ ತನಗೆ ಯುಕ್ತವೆಂದು ಕಂಡುಬಂದಂಥ ನಿರ್ದೇಶನಗಳನ್ನು ನೋಂದಣಿ ಅಧಿಕಾರಿಗೆ ನೀಡಬಹುದು. ರಾಜ್ಯಸರ್ಕಾರವು, ಸದರಿ ನಿರ್ದೇಶನಗಳನ್ನು ಹೊರಡಿಸುವ ಆವಶ್ಯಕತೆಗೆ ಸಂಬಂಧಪಟ್ಟ ಕಾರಣಗಳನ್ನು ದಾಖಲಿಸತಕ್ಕದ್ದು ಮತ್ತು ಅಂಥ ನಿರ್ದೇಶನಗಳನ್ನು ಪಾಲಿಸುವುದು ನೋಂದಣಿ ಅಧಿಕಾರಿಯ ಕರ್ತವ್ಯವಾಗಿರತಕ್ಕದ್ದು.

24. **ಸದ್ಭಾವನೆಯಿಂದ ಕೈಗೊಂಡ ಕ್ರಮಕ್ಕೆ ರಕ್ಷಣೆ.**- ಈ ಅಧಿನಿಯಮದ ಅಥವಾ ಅದರ ಅಡಿಯಲ್ಲಿ ರಚಿಸಿದ ಯಾವುದೇ ನಿಯಮ ಅಥವಾ ವಿನಿಯಮದ ಅಡಿಯಲ್ಲಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ರಾಜ್ಯಸರ್ಕಾರದ ಅಥವಾ ಯಾವೊಬ್ಬ ಅಧಿಕಾರಿಯ, ಪ್ರಾಧಿಕಾರದ ಅಥವಾ ಯಾವೊಬ್ಬ ವ್ಯಕ್ತಿಯ ವಿರುದ್ಧ ಯಾವುದೇ ದಾವೆ, ಅಭಿಯೋಜನೆ ಅಥವಾ ಇತರೆ ಕಾನೂನು ವ್ಯವಹರಣೆಗಳನ್ನು ಹೂಡಲು ಅವಕಾಶವಿರತಕ್ಕದ್ದಲ್ಲ.

25. **ತೊಂದರೆಗಳ ನಿವಾರಣೆ.**- ಈ ಅಧಿನಿಯಮ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆ ಉದ್ಭವಿಸಿದಲ್ಲಿ, ರಾಜ್ಯ ಸರ್ಕಾರವು ಸರ್ಕಾರಿ ರಾಜಪತ್ರದಲ್ಲಿ ಆದೇಶವನ್ನು ಹೊರಡಿಸುವ ಮೂಲಕ ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಲ್ಲದ ಮತ್ತು ಆ ತೊಂದರೆಗಳನ್ನು ನಿವಾರಿಸುವುದಕ್ಕಾಗಿ ಅವಶ್ಯಕವೆಂದು ಅಥವಾ ವಿಹಿತವೆಂದು ತನಗೆ ಕಂಡುಬಂದ ಉಪಬಂಧಗಳನ್ನು ಆದೇಶದ ಮೂಲಕ ಮಾಡಬಹುದು;

ಪರಂತು, ಗೊತ್ತುಪಡಿಸಲಾದ ದಿನಾಂಕದಿಂದ ಎರಡು ವರ್ಷಗಳ ಅವಧಿಯ ಮುಕ್ತಾಯವಾದ ತರುವಾಯ ಯಾವುದೇ ಆದೇಶವನ್ನು ಹೊರಡಿಸತಕ್ಕದ್ದಲ್ಲ.

26. **ನಿಯಮಗಳ ರಚನಾಧಿಕಾರ.**- (1) ರಾಜ್ಯ ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ನೆರವೇರಿಸಲು ಪೂರ್ವ ಪ್ರಕಟಣೆಯ ತರುವಾಯ ಅಧಿಸೂಚನೆಯ ಮೂಲಕ ನಿಯಮಗಳನ್ನು ರಚಿಸಬಹುದು. (2) ವಿಶೇಷವಾಗಿ ಮತ್ತು ಈ ಹಿಂದೆ ಹೇಳಿದ ಅಧಿಕಾರದ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ ಅಂಥ ನಿಯಮಗಳು, ಈ ಮುಂದಿನ ಎಲ್ಲಾ ಅಥವಾ ಯಾವುವೇ ವಿಷಯಗಳಿಗಾಗಿ ಉಪಬಂಧ ಕಲ್ಪಿಸಬಹುದು, ಎಂದರೆ:- (ಎ) ನೋಂದಣೆಗಾಗಿ ಅರ್ಜಿಯನ್ನು ಯಾವ ರೀತಿಯಲ್ಲಿ ಸಲ್ಲಿಸತಕ್ಕದ್ದು ಮತ್ತು 5ನೇ ಪ್ರಕರಣದ ಅಡಿಯಲ್ಲಿ ಸಂದಾಯವಾಗತಕ್ಕ ಶುಲ್ಕ: (ಬಿ) 6ನೇ ಪ್ರಕರಣದ ಅಡಿಯಲ್ಲಿ ನೋಂದಣಿಗಾಗಿ ಅಂಥ ಇತರೆ ಅಂಶಗಳು; (ಸಿ) ನೋಂದಣಿಯ ನವೀಕರಣಕ್ಕಾಗಿ ಸಂದಾಯವಾಗತಕ್ಕ ಶುಲ್ಕಗಳ ರೀತಿ ಮತ್ತು ಸಂದಾಯ; (ಡಿ) 9ನೇ ಪ್ರಕರಣದ ಅಡಿಯಲ್ಲಿ ಪ್ರತಿಯೊಂದು ಖಾಸಗಿ ವೈದ್ಯಕೀಯ ಸಂಸ್ಥೆಯು ನಿರ್ವಹಿಸತಕ್ಕ ಗುಣಮಟ್ಟಗಳು; (ಇ) 12ನೇ ಪ್ರಕರಣದ ಅಡಿಯಲ್ಲಿ ಚಿಕಿತ್ಸಾಲಯ (ಕ್ಲಿನಿಕಲ್) ದಾಖಲೆಗಳನ್ನು ನಿರ್ವಹಿಸತಕ್ಕ ಕ್ರಮ; (ಎಫ್) 17ನೇ ಪ್ರಕರಣದ ಅಡಿಯಲ್ಲಿ ಯಾವ ಕ್ರಮದಲ್ಲಿ ಅಪೀಲನ್ನು ಸಲ್ಲಿಸಬಹುದು ಮತ್ತು ಅಂಥ ಅಪೀಲಿಗಾಗಿನ ಶುಲ್ಕಗಳು; (ಎಚ್) ಈ ಅಧಿನಿಯಮದ ಮೂಲಕ ವ್ಯಕ್ತವಾಗಿ ಅಗತ್ಯಪಡಿಸಲಾದ ಅಥವಾ ನಿಯಮಿಸ ಬೇಕಾದವುಗಳೆಂದು ಅನುಮತಿಸಲಾದ ಅಥವಾ ಯಾವುದರ ಸಂಬಂಧದಲ್ಲಿ ಈ ಅಧಿನಿಯಮದಲ್ಲಿ ಉಪಬಂಧಗಳನ್ನು ಮಾಡಿರುವುದಿಲ್ಲವೋ ಅಥವಾ ಅಪರ್ಯಾಪ್ತ ಉಪಬಂಧಗಳನ್ನು ಮಾಡಲಾಗಿದೆಯೋ ಮತ್ತು ಅಧಿನಿಯಮದ ಸೂಕ್ತ ಜಾರಿಗೊಳಿಸುವಿಕೆಗಾಗಿ ಅವಶ್ಯವೆಂದು ರಾಜ್ಯಸರ್ಕಾರವು ಅಭಿಪ್ರಾಯ ಪಡುವ ಒಂದು ಉಪಬಂಧಕ್ಕೆ ಸಂಬಂಧಪಟ್ಟ ಎಲ್ಲಾ ವಿಷಯಗಳು;

27. **ನಿಯಮಗಳು ಮತ್ತು ಆದೇಶಗಳನ್ನು ರಾಜ್ಯ ವಿಧಾನ ಮಂಡಲದ ಮುಂದೆ ಮಂಡಿಸಬೇಕು.**- 26ನೇ ಪ್ರಕರಣದ ಅಡಿಯಲ್ಲಿ ಮಾಡಲಾದ ಪ್ರತಿಯೊಂದು ಆದೇಶ ಮತ್ತು 27ನೇ ಪ್ರಕರಣದ ಅಡಿಯಲ್ಲಿ ರಚಿಸಲಾದ ಪ್ರತಿಯೊಂದು ನಿಯಮವನ್ನು ಅದನ್ನು ರಚಿಸಿದ ತರುವಾಯ ಸಾಧ್ಯವಾದಷ್ಟು ಬೇಗನೆ ರಾಜ್ಯವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚಿನ ಅನುಕ್ರಮ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಮಂಡಿಸತಕ್ಕದ್ದು, ಮತ್ತು ಹಾಗೆ ಮಂಡಿಸಲಾದ ಅಧಿವೇಶನವು ಅಥವಾ ನಿಕಟೋತ್ತರ ಅಧಿವೇಶನವು ಮುಕ್ತಾಯವಾಗುವ ಮೊದಲು, ಆ ನಿಯಮದಲ್ಲಿ ಯಾವುದೇ ಮಾರ್ಪಾಟು ಮಾಡಬೇಕೆಂದು ಎರಡೂ ಸದನಗಳು ಒಪ್ಪಿದರೆ ಅಥವಾ ಯಾವುದೇ ನಿಯಮವನ್ನು ರಚಿಸಬಾರದೆಂದು ತೀರ್ಮಾನಿಸಿದರೆ, ಆ ತರುವಾಯ, ಆ ನಿಯಮವು ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂಧರ್ಭಾನುಸಾರ ಪರಿಣಾಮಕಾರಿಯಾಗತಕ್ಕದ್ದಲ್ಲ. ಅದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಯಮಾದ ಅಥವಾ ಆದೇಶದ ಮೇರೆಗೆ ತತ್ಪೂರ್ವದಲ್ಲಿ ಮಾಡಲಾದ ಯಾವುದೆ ಕಾರ್ಯದ ಸಿಂಧುತ್ವಕ್ಕೆ ಪ್ರತಿಕೂಲ ಪರಿಣಾಮವನ್ನುಂಟು ಮಾಡತಕ್ಕದ್ದಲ್ಲ.

28. **ನಿರಸನ ಮತ್ತು ಉಳಿಸುವಿಕೆಗಳು:**- (1) ಕರ್ನಾಟಕ ಖಾಸಗಿ ನರ್ಸಿಂಗ್ ಹೋಮ್‌ಗಳ (ನಿಯಂತ್ರಣ) ಅಧಿನಿಯಮ. 1976 (1976ರ ಕರ್ನಾಟಕ ಅಧಿನಿಯಮ 75) ನ್ನು ಈ ಮೂಲಕ ನಿರುಸನಗೊಳಿಸಲಾಗಿದೆ.

(2) ಹಾಗೆ ನಿರಸಿತವಾಗಿದ್ದಾಗ್ಯೂ:-

(ಎ) ನಿರಸಿತ ಅಧಿನಿಯಮದ ಅಡಿಯಲ್ಲಿ ಮಡಲಾದ ಯಾವುದೇ ಕಾರ್ಯ ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು, ಈ ಅಧಿನಿಯಮದ ಸಂವಾದಿ ಉಪಬಂದಗಳ ಅಡಿಯಲ್ಲಿ ಮಾಡಲಾಗಿದೆ ಅಥವಾ ಕೈಗೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು; (ಬಿ) ಈ ಅಧಿನಿಯಮವು ಪ್ರಾರಂಭವಾಗುವುದಕ್ಕೆ ಮೊದಲು ನೋಂದಣಿಗಾಗಿ ಅಥವಾ ನವೀಕರಣಕ್ಕಾಗಿ ನಿರಸಿತಗೊಂಡ ಅಧಿನಿಯಮದ ಅಡಿಯಲ್ಲಿ ಸಲ್ಲಿಸಿದ ಎಲ್ಲಾ ಅರ್ಜಿಗಳು ಮತ್ತು ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಇತ್ಯರ್ಥದಲ್ಲಿರುವ ಅರ್ಜಿಗಳನ್ನು ಕೊನೆಗೊಳಿಸತಕ್ಕದ್ದು ಮತ್ತು ಅಂಥ ಅರ್ಜಿಯ ಸಂಬಂಧದಲ್ಲಿ ಯಾವುದಾದರೂ ಶುಲ್ಕ ಸಂದಾಯಮಾಡಿದ್ದಲ್ಲಿ, ಅದನ್ನು ಅರ್ಜಿದಾರನಿಗೆ ಮರುಸಂದಾಯಮಾಡತಕ್ಕದ್ದು ಮತ್ತು ಅಂಥ ಅರ್ಜಿದಾರರು, ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ನೋಂದಣಿಗಾಗಿ ಹೊಸದಾಗಿ ಅರ್ಜಿಯನ್ನು ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಜಿ ಕೆ ಬೋರೇಗೌಡ,
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ